# ಕನ್ನಡ ನವೋದಯ ಕಾವ್ಯದಲ್ಲಿ ನಾಡು ನುಡಿ ಚಿಂತನೆ: ಕುವೆಂಪು, ಬೇಂದ್ರೆ, ಪು.ತಿ.ನ

(ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಿಬಂಧ)


ಸಂಶೋಧಕ:
ಕೆ.ಆರ್. ಪ್ರವೀಣ್ ಪಟೇಲ್

ಮಾರ್ಗದರ್ಶಕರು:
ಡಾ।। ಸಿ. ಜಿ. ಉಷಾದೇವಿ





ಕರ್ನಾಟಕ ಸಂಘ (ರಿ), ಮಂಡ್ಯ
ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
೨೦೦೭-೨೦೦೮

# ಕನ್ನಡ ನವೋದಯ ಕಾವ್ಯದಲ್ಲಿ ನಾಡು ನುಡಿ ಚಿಂತನೆ: ಕುವೆಂಪು, ಬೇಂದ್ರೆ, ಪು.ತಿ.ನ

(ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರಪಡಿಸಿದ ನಿಬಂಧ)


ಸಂಶೋಧಕ:

ಕೆ.ಆರ್. ಪ್ರವೀಣ್ ಪಟೇಲ್

ಮಾರ್ಗದರ್ಶಕರು:

ಡಾ|| ಸಿ. ಜಿ. ಉಷಾದೇವಿ







ಕರ್ನಾಟಕ ಸಂಘ (ರಿ), ಮಂಡ್ಯ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭–೨೦೦೮

# ಪ್ರಮಾಣ ಪತ್ರ

ಶ್ರೀ. ಕೆ. ಆರ್. ಪ್ರವೀಣ್ ಪಟೇಲ್ ಅವರು ಕನ್ನಡ ಎಂ.ಫಿಲ್ ಪದವಿಗಾಗಿ ಸಾದರಪಡಿಸಿದ "ಕನ್ನಡ ನವೋದಯ ಕಾವ್ಯದಲ್ಲಿ ನಾಡು-ನುಡಿ ಚಿಂತನೆ: ಕುವೆಂಪು, ಬೇಂದ್ರೆ, ಪು.ತಿ.ನ" ಎಂಬ ನಿಬಂಧ ಮೂಲ ಸಂಶೋಧನಾ ಕೃತಿಯಾಗಿದೆ. ಇವರು ನನ್ನ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ. ಎಲ್ ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ಈ ಸಂಶೋಧನಾ ಕಾರ್ಯವನ್ನು ಕೈಗೊಂಡಿದ್ದಾರೆ. ಇದು ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ: 12.09.2008

ಮಾರ್ಗದರ್ಶಕರು
ಡಾ|| ಸಿ.ಜಿ ಉಷಾದೇವಿ
ಆಯ್ಕೆ ಶ್ರೇಣಿ ಉಪನ್ಯಾಸಕರು,
ವಿದ್ಯೋದಯ ಪದವಿ ಕಾಲೇಜು,
ಟಿ. ನರಸೀಪುರ

# ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ನೇ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ. ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು "ಕನ್ನಡ ನವೋದಯ ಕಾವ್ಯದಲ್ಲಿ ನಾಡು-ನುಡಿ ಚಿಂತನೆ: ಕುವೆಂಪು, ಬೇಂದ್ರೆ, ಪು.ತಿ.ನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ|| ಸಿ. ಜಿ. ಉಷಾದೇವಿ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

K.R. Praveen Kumar

ದಿನಾಂಕ: 12-09-2008 ಅಭ್ಯರ್ಥಿಯ ಸಹಿ

# ಕನ್ನಡ ನವೋದಯ ಕಾವ್ಯದಲ್ಲಿ ನಾಡು–ನುಡಿ ಚಿಂತನೆ: ಕುವೆಂಪು, ಬೇಂದ್ರೆ, ಪು.ತಿ.ನ.

## ಪರಿವಿಡಿ

## ಅಧ್ಯಾಯ ೧

## ಉದ್ದೇಶ ಮತ್ತು ವ್ಯಾಪ್ತಿ

"ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ" ಅಂದರೆ ಜನ್ಮ ಭೂಮಿ ಎನ್ನುವುದು ಸ್ವರ್ಗಕ್ಕಿಂತ ಮಿಗಿಲಾದುದು ಎಂಬ ಉಕ್ತಿಯಿದೆ. ಹುಟ್ಟಿದ ಊರು, ಹುಟ್ಟಿದ ನಾಡು, ಇವುಗಳ ವಿಷಯದಲ್ಲಿ ಜನರಲ್ಲಿ ಪ್ರೀತಿ ಅಭಿಮಾನಗಳಿರುವುದು ಸ್ವಾಭಾವಿಕ ಇದು ರಾಷ್ಟ್ರೀಯತ್ವದ ಪ್ರಾಥಮಿಕ ಅಂಶ. ಹಾಡಲು ಬಾರದ ಹಕ್ಕಿಯಿರಬಹುದು, ಆದರೆ ನಾಡು ನುಡಿಗಳ ಬಗೆಗೆ ಬರೆಯದ ಕವಿಯಿರಲು ಸಾಧ್ಯವಿಲ್ಲ. ಇದು ಸಾರ್ವಕಾಲಿಕ ಮತ್ತು ಸಾರ್ವತ್ರಿಕ ಸತ್ಯ.

ನಾಡು ಎಂದರೆ ಕನ್ನಡ ನಾಡು ಎಂಬ ಪರಿಮಿತಾರ್ಥವಷ್ಟೇ ಅಲ್ಲದೆ ಅದನ್ನೊಳಗೊಂಡು ರಾಷ್ಟ್ರೀಯತೆಯ ವಿಶಾಲಾರ್ಥದಲ್ಲಿ ತೆಗೆದುಕೊಳ್ಳುವುದು ಸೂಕ್ತವೆನಿಸುತ್ತದೆ. ನಾಡು ಮತ್ತು ನುಡಿಗಳು ಯಾವುದೇ ಸಂಸ್ಕೃತಿಯ ಎರಡು ಮುಖ್ಯ ನೆಲೆಗಳು, ಸೃಷ್ಟಿಯ ಪ್ರಕೃತಿ ಮತ್ತು ಪುರುಷ ರೂಪಗಳು, ಇವುಗಳ ಶಿಶು ಮನುಷ್ಯ, ಇವುಗಳ ಲಾಲನೆ ಪಾಲನೆಯಲ್ಲಿ ವಿಕಾಸ ಹೊಂದುತ್ತಾ, ಅಂತಿಮವಾಗಿ ಅವುಗಳಲ್ಲಿಯೇ ಲೀನವಾಗುತ್ತಾನೆ. ಹೀಗೆ ಹುಟ್ಟು ಮತ್ತು ಸಾವುಗಳ ನಡುವೆ ಇವುಗಳೊಂದಿಗೆ ಪಡೆದ ತಾದಾತ್ಮ್ಯದ ಪರಿಣಾಮವಾಗಿ ಅವನ್ನು ಕುರಿತು ಹಲವು ನೆಲೆಗಳಲ್ಲಿ ಕ್ರಿಯಾತ್ಮಕವಾಗಿ ಪ್ರಕಟಗೊಳ್ಳುತ್ತಾನೆ.

ಒಟ್ಟು ಸಂಸ್ಕೃತಿಯ ವಕ್ತಾರನಾದ ಕವಿಯ ನಾಡು–ನುಡಿಗಳ ಅಭಿವ್ಯಕ್ತಿ ಕ್ರಮ ಉಳಿದೆಲ್ಲ ಕಲಾ ಮತ್ತು ಸಾಹಿತ್ಯ ಪ್ರಕಾರಗಳಿಗಿಂತಲೂ ಸಂಸ್ಕೃತಿಯ ಮೇಲೆ ಬೀರುವ ಪರಿಣಾಮದ ದೃಷ್ಟಿಯಿಂದ ಮುಖ್ಯ. ತಾಯಿ ತಾಯ್ನಾಡುಗಳು ಸ್ವರ್ಗಕ್ಕಿಂತಲೂ ಮಿಗಿಲಾದುದು ಎಂಬ ವಾಲ್ಮೀಕಿಯ ಮಾತು ಕೇವಲ ಭಾವುಕ ಎನಿಸದೆ ವೈಚಾರಿಕ ನೆಲೆಯಲ್ಲೂ ಗಟ್ಟಿ ಎನಿಸುವುದು. ಈ ಬಗೆಯ ಅಭಿವ್ಯಕ್ತಿ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ನಿರಂತರವಾಗಿ ಕಂಡಿದೆ. ಇದು ವೈವಿಧ್ಯಮಯವೂ ಆಗಿದೆ. ಅದಕ್ಕೆ ತನ್ನದೇ ಆದ ಚಾರಿತ್ರಿಕ ಕಾರಣಗಳು ಇವೆ.

ಕನ್ನಡ ಕಾವ್ಯ ಪರಂಪರೆಯ ಎರಡು ಸಾವಿರ ವರ್ಷಗಳ ಕ್ರಿಯಾಶೀಲತೆಯಲ್ಲಿ ಕನ್ನಡ ಪರ ಚಿಂತನಾ ಸ್ವರೂಪದ ಅವಸ್ಥಾಂತರಗಳನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ. ಶ್ರೀ ವಿಜಯ, ಪಂಪ ಮೊದಲ್ಗೊಂಡು ಆಧುನಿಕ ಕವಿಗಳವರೆಗೂ ಇದರ ವ್ಯಾಪ್ತಿಯಿದೆ.

ಏಕೆಂದರೆ "ದೇಶ ನನ್ನದು, ನನ್ನದು ನಾಡು

ಎನ್ನದ ಮಾನವನೆದೆ ಸುಡುಗಾಡು" (ಕುವೆಂಪು)

ಎನ್ನುವ ಪ್ರಜ್ಞೆ ಸಂವೇದನಾ ಶೀಲನಾದ ಕವಿಯಲ್ಲಿ ಸಹಜವಾಗಿಯೇ ಇದೆ.

ನಾಡು ಎಂದರೆ ಅದರೊಂದಿಗೆ ಅಲ್ಲಿನ ನುಡಿಯು ಸೇರಿಕೊಳ್ಳುತ್ತದೆ, ಅವೆರಡು ಅಭಿನ್ನ. ಯಾವ ಕವಿಗಾದರೂ ತಾನು ಜನ್ಮ ತಾಳಿದ ಭೂಮಿಯ ಬಗ್ಗೆ ಎಷ್ಟು ಪ್ರೀತಿ ಅಭಿಮಾನವಿರುತ್ತದೋ ಅಷ್ಟೇ ಪ್ರೀತಿ ಅಭಿಮಾನ ತನ್ನ ನುಡಿಯ ಬಗ್ಗೆಯೂ ಇರುತ್ತದೆ. ಏಕೆಂದರೆ "ಒಂದು ಪ್ರಾಣ ಪೂರ್ಣವಾದ ದೇಹ, ಮತ್ತೊಂದು ಅದರ ವಾಣಿ ತಾನು ಜನ್ಮ ತಾಳಿದ ಭಾವವು ತಾನು ನುಡಿಯುವ ನುಡಿ ಎರಡೂ ಕವಿಗೆ ಪ್ರಿಯ, ಪವಿತ್ರ"[7].

ಸಾಹಿತ್ಯ ಮತ್ತು ಸಾಹಿತ್ಯದ ಹುಟ್ಟು, ಬೆಳವಣಿಗೆ, ಬದುಕು ಈ ಸಮಾಜದಲ್ಲಿ ಆಗುತ್ತದೆ. ಆದ್ದರಿಂದ ಸಾಹಿತಿ ಸ್ಪಂದಿಸಬೇಕಾದ್ದು, ಈ ಸಮಾಜದ ಬದುಕಿನೊಂದಿಗೆ ಮತ್ತು ಅದರ ಕಷ್ಟ ಸುಖಗಳೊಂದಿಗೆ. ಸಾಹಿತ್ಯವೇ ಸಾಹಿತಿಯ ಕಲಾ ಮಾಧ್ಯಮ. ಆದ್ದರಿಂದ ಯಾವುದು ಅವನನ್ನು ತೀವ್ರವಾಗಿ ಕಾಡಿಸುತ್ತಿದೆಯೋ ಅದು ಬರವಣಿಗೆಯಲ್ಲಿ ಬರಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಾಚೀನ ಕನ್ನಡ ಕಾವ್ಯವನ್ನು ಗಮನಿಸಿದಾಗ ನಾಡು–ನುಡಿಗಳ ಬಗೆಗಿನ ಪ್ರಜ್ಞೆಯ ಅಭಿಮಾನದ ನೆಲೆಯಲ್ಲಿ ಪ್ರತಿಪಾದಿತವಾಗಿರುವುದೇ ಹೆಚ್ಚು. ಆದರೆ ನವೋದಯ ಸಂದರ್ಭದ ಒತ್ತಡಗಳು ಕನ್ನಡ ಕರ್ನಾಟಕತ್ವದ ಸ್ವರೂಪ, ಶ್ರೇಷ್ಠತೆ, ಸವಾಲುಗಳು, ಆತಂಕಗಳ ಸಂಕೀರ್ಣ ರೂಪದಲ್ಲಿ ನವೋದಯ ಕವಿಗಳ ಚಿಂತನಾಂಶವಾಗಿ ಸಮಕಾಲೀನ ತುರ್ತಾಗಿ ಕಾವ್ಯಾಭಿವ್ಯಕ್ತಿಗೊಂಡ ರೀತಿಯನ್ನು ನವೋದಯ ಪಂಥದ ರತ್ನತ್ರಯರೆಂದೇ ಪ್ರಸಿದ್ಧವೆತ್ತ ಕುವೆಂಪು, ಬೇಂದ್ರೆ, ಪು.ತಿ.ನ ರ ಕವಿತೆಗಳ ಅಧ್ಯಯನದ ಮೂಲಕ ಗುರುತಿಸುವ ಪ್ರಯತ್ನವು ನನ್ನ ಅಧ್ಯಯನದ ಹಿಂದಿನ ಪ್ರೇರಣೆಯಾಗಿದೆ.

ಸಮಾಜದ ಸಾಮೂಹಿಕ ಸಮಸ್ಯೆಗಳು ಯಾವತ್ತೂ ದೇಶದ ಸಮಸ್ಯೆಗಳು ಅಂದರೆ, ಅಲ್ಲಿನ ರಾಜಕೀಯ ವ್ಯವಸ್ಥೆಯ ಸಮಸ್ಯೆಗಳು ಅಂದ ಮೇಲೆ ಸಾಮಾಜಿಕ ಜೀವನವನ್ನು ಪ್ರಮುಖ ದ್ರವ್ಯವಾಗಿ ಸ್ವೀಕರಿಸುವ ಸಾಹಿತಿ ರಾಜಕೀಯ ಸಂಗತಿಗಳಲ್ಲೂ ತಾತ್ವಿಕವಾಗಿ ತನ್ನನ್ನು ಗುರುತಿಸಿಕೊಳ್ಳುವ ಕ್ರಿಯೆಗೆ ತೊಡಗಬೇಕಾಗುತ್ತದೆ. ಹಾಗಾಗಿ ಸಮಾಜದ ಭಿನ್ನ ಸ್ತರಗಳಿಂದ ಬಂದ ಪ್ರಸ್ತುತ ಕವಿಗಳ ಸಾಮಾಜಿಕ ಹಿನ್ನೆಲೆ ಮೂಲಕ ಅವರ ಚಿಂತನೆಯ ಮೇಲಿನ ಪ್ರಭಾವ ಪ್ರೇರಣೆಗಳನ್ನು ಈ ಅಧ್ಯಯನವು ಗ್ರಹಿಸುತ್ತದೆ.

ಏಕೆಂದರೆ ನವೋದಯ ಕಾವ್ಯದ ಸಂದರ್ಭದಲ್ಲಿ ಆಧ್ಯಾತ್ಮಿಕತೆ, ದೇಶ ಪ್ರೇಮ, ಭಾಷಾ ಪ್ರೇಮ, ಬಡತನ, ನಿಸರ್ಗ ಪ್ರಿಯತೆ ಮುಂತಾದ ವಸ್ತುಗಳು ಪ್ರಧಾನವಾಗಿದ್ದು, ಇವೆಲ್ಲವೂ ಅಂದಿನ ಸಾಮಾಜಿಕ ಅರಿವಿನ ಭಾಗವಾಗಿದ್ದವು.

"ಭಾರತೀಯರಿಗೆ ಮತ್ತು ಕನ್ನಡಿಗರಿಗೆ ಲುಪ್ತವಾಗಿದ್ದ ಆತ್ಮಗೌರವವನ್ನು ಮರಳಿ ಸಂಪಾದಿಸಿಕೊಡುವ ಸಲುವಾಗಿ ದೇಶಭಕ್ತಿ, ಭಾಷಾಪ್ರೇಮಗಳಂತಹ ಭಾವನಿರ್ಭರವಾದ ಸಂಗತಿಗಳನ್ನು ಆರಿಸಿಕೊಳ್ಳುವುದು ಅಂದಿನ ಕವಿಗಳಿಗೆ ಅನಿವಾರ್ಯವಾಗಿತ್ತು. ಸಮಾಜದ ಅನುಕ್ತ ಬೇಡಿಕೆಗಳಿಗೆ ಅನುಗುಣವಾಗಿಯೇ ಕ್ರಾಂತದರ್ಶಿಗಳಾದ ಕವಿಗಳು ಕಾವ್ಯವಸ್ತುವನ್ನು ಆರಿಸಿಕೊಳ್ಳುವುದರಲ್ಲಿ ಆಶ್ಚರ್ಯವೇನು ಇಲ್ಲ. ಆದರೆ ದೇಶದ ರಾಜಕೀಯ ಏಕತೆಯು ಸಾಧ್ಯವಾಗದೇ ಹೋಗಿದ್ದಾಗ ಸಾಂಸ್ಕೃತಿಕ ಏಕತೆಯು ಹಿಂದೂ ಧರ್ಮದ ಸರ್ವಸಮಾನ ಅಂಶಗಳಿಂದಲೇ ರೂಪವಾಗುತ್ತಿದ್ದಾಗ ರಾಜಭಕ್ತಿಯ ಸ್ಥಳದಲ್ಲಿ ದೇಶಭಕ್ತಿಯನ್ನು ಪ್ರತಿಷ್ಠಾಪಿಸುವುದು ಕೂಡ ಹೊಸ ಸಾಧನೆಯಾಗಿತ್ತು"[೨].

* ಪ್ರಸ್ತುತ ಅಧ್ಯಯನವು ನವೋದಯ ಕಾವ್ಯದ ಆಧಾರ ಸ್ಥಂಭಗಳಾದ ಕುವೆಂಪು, ಬೇಂದ್ರೆ, ಪು.ತಿ.ನ ರವರ ಕವಿತೆಗಳನ್ನು ಪ್ರಮುಖವಾಗಿ ಆಕರವಾಗಿರಿಸಿಕೊಂಡಿರುವುದರ ಹಿಂದೆ ಇಡೀ ನವೋದಯ ಪ್ರಜ್ಞೆಯನ್ನು ರೂಪಿಸಿದ ಈ ತ್ರಿವಳಿಗಳ ಅಧ್ಯಯನದ ಮೂಲಕ ನವೋದಯ ಪಂಥದ ನಾಡು–ನುಡಿ ಚಿಂತನೆಯ ತಾತ್ವಿಕ ನೆಲೆಗಟ್ಟನ್ನು ರೂಪಿಸಬಹುದೆಂಬ ಧೋರಣೆಯಿಂದ ಹೊರಟಿದೆ. ಇದಕ್ಕೆ ಪ್ರೇರಕವಾಗಿ ನವೋದಯ ಕಾವ್ಯ ಸ್ವರೂಪ ಮತ್ತು ಈ ಕವಿಗಳ ಪಾತ್ರದ ಕುರಿತ ವಿಶ್ಲೇಷಣೆಯಿಂದ ತೊಡಗಿಸಿಕೊಂಡು ಅಧ್ಯಯನ ಮುಂದುವರೆಯುತ್ತದೆ.

ಕವಿತೆಗಳ ಹಿಂದಿರುವ ವೈಚಾರಿಕತೆಯನ್ನು ಅಧ್ಯಯನ ಮಾಡುವಾಗ ಕವಿತೆಯ ಹೊರಗಿನ ಪ್ರಭಾವಗಳ ತಿಳುವಳಿಕೆಯು ಉಪಯುಕ್ತವಾಗುತ್ತದೆ. ಪ್ರಸ್ತುತ ಕನ್ನಡ ಪರಂಪರೆಯ ಅಕ್ಷರ ರೂಪವಾದ ಕಾವ್ಯದಲ್ಲಿ ವ್ಯಕ್ತವಾದ ಕನ್ನಡಪರ ಚಿಂತನೆಯ ಸ್ವರೂಪವನ್ನು ನಿರ್ವಚಿಸಿಕೊಳ್ಳುವುದು ಸಮಕಾಲೀನ ಸಂದರ್ಭದ ಅಗತ್ಯವೆನಿಸಿ ಅಭಿಮಾನ ಸಂಘರ್ಷಿತ ಆತುರ ಚಿಂತನೆ ಹೀಗೆ ಹಲವು ನೆಲೆಗಳ ಹರವು ಚಾಚುರುವ ಕಾವ್ಯ ಪರಂಪರೆಯನ್ನು ಕೆಲವೇ ಮುಖ್ಯ ಕವಿಗಳ ಸ್ಥೂಲ ಅಧ್ಯಯನದ ಮೂಲಕ ಅರಿಯಲು ಪ್ರಯತ್ನಿಸಲಾಗಿದೆ.

ಕವಿತೆಗಳ ಹಿಂದಿರುವ ವೈಚಾರಿಕತೆಯನ್ನು ಅಧ್ಯಯನ ಮಾಡುವಾಗ ಕವಿತೆಯ ಹೊರಗಿನ ಪ್ರಭಾವಗಳ ತಿಳುವಳಿಕೆಯು ಉಪಯುಕ್ತವಾಗುತ್ತದೆ. ಹಾಗಾಗಿ ಪ್ರಸ್ತುತ ಅಧ್ಯಯನದ ಹಿನ್ನೆಲೆಗೆ ಸ್ವಾತಂತ್ರ್ಯ ಪೂರ್ವ ಭಾರತದ ಸ್ವಾತಂತ್ರ್ಯ ಮತ್ತು ಭಾಷಾ ಚಳುವಳಿಗಳ ಸ್ವರೂಪವನ್ನು ಅರಿಯುವುದು ಅವಶ್ಯವಾಗುತ್ತದೆ.

ಕವಿಯ ವ್ಯಕ್ತಿತ್ವ, ಪರಂಪರೆಯ ಜೊತೆಗಿನ ಆತನ ಅನುಸಂಧಾನ ಸಮಕಾಲೀನ ಸಾಮಾಜಿಕ ಸಾಹಿತ್ಯಕ ಸನ್ನಿವೇಶದೊಂದಿಗೆ ಕವಿಯು ರೂಪಿಸಿಕೊಂಡಿರುವ ಸಂಬಂಧಗಳ ಹಿನ್ನೆಲೆಯಲ್ಲಿ ಕವಿಗಳ ಚಿಂತನೆಗಳ ಸ್ವರೂಪವನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಆಯಾ ಕವಿಗಳ ಕೃತಿಗಳಲ್ಲಿ ವ್ಯಕ್ತವಾಗಿರುವ ಕನ್ನಡ ನಾಡು–ನುಡಿಗಳ ಚಿಂತನಾ ಸ್ವರೂಪ ಮತ್ತು ಅದಕ್ಕೆ ಹಿನ್ನೆಲೆಯಾದ ಸಾಂಸ್ಕೃತಿಕ ಒತ್ತಡಗಳನ್ನು ಗ್ರಹಿಸಲು ಪ್ರಯತ್ನಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕಾವ್ಯದ ವಸ್ತು ಮತ್ತು ಅದರ ನಿರ್ವಹಣೆ ಮತ್ತು ಅದರ ಮೂಲಕ ವ್ಯಕ್ತವಾಗಿರುವ ನಾಡು–ನುಡಿಗಳ ಪರವಾದ ಚಿಂತನೆಯ ವಿವಿಧ ನೆಲೆಗಳನ್ನು ಪರಿಶೀಲಿಸಲಾಗಿದೆ.

ವಸ್ತುವಿನ ದೃಷ್ಟಿಯಿಂದ ಮುಖ್ಯವಾಗುವ ಪದ್ಯಗಳನ್ನು ಮಾತ್ರ ಆರಿಸಿ ಅವುಗಳ ಮೂಲಕ ಕನ್ನಡ ನಾಡು–ನುಡಿಗಳ ಪರವಾದ ಕೆಲವು ಆಲೋಚನಾ ಕ್ರಮ ಮತ್ತು ವಿನ್ಯಾಸಗಳನ್ನು ಗ್ರಹಿಸಲು ಯತ್ನಿಸಲಾಗಿದೆ.

ಕವಿಯು ಬರೆಯುವುದಕ್ಕೂ, ಬದುಕುವುದಕ್ಕೂ ನಡುವೆ ಇರುವ ಪರಸ್ಪರ ವಿರೋಧವು ಅವರ ಚಿಂತನೆಯನ್ನು ಪ್ರಭಾವಿಸುತ್ತದೆಯೋ, ಅಂದರೆ ಸ್ವಾತಂತ್ರ್ಯ ಹೋರಾಟವು ತೀವ್ರತೆಯ ಸ್ಥಿತಿಯಲ್ಲಿದ್ದಾಗ, ಈ ಕವಿಗಳ ಸಾಹಿತ್ಯ ಸ್ಪಂದನದ ಹಿಂದೆ ಹೋರಾಟದ ಬಗೆಗಿನ ಸಹಾನುಭೂತಿ ನೇರ ಪಾಲ್ಗೊಳ್ಳುವಿಕೆಗಳ ಪಾತ್ರವೇನು ಎಂಬುದು ಮುಖ್ಯವಾಗುತ್ತದೆ.

ಸಮಾನ ಅವಕಾಶದಲ್ಲಿ ಬೆಳೆಯುವ ಹೂ ವೈವಿಧ್ಯಗಳಂತೆ ಸಮಾನ ಪರಿಸರಕ್ಕೆ ವಿಭಿನ್ನ ಹಿನ್ನೆಲೆಯ ಚೇತನಗಳು ಪಡಿ ಮಿಡಿಯುವ ಬಗೆ ಮತ್ತು ಸತ್ವವನ್ನು ತೌಲನಿಕ ಅಧ್ಯಯನದ ಮೂಲಕ ಗುರುತಿಸುವುದರ ಜೊತೆಗೆ ಪ್ರತಿ ಕವಿಯ ಕವಿತೆಗಳ ಹಿಂದಿನ ಚಿಂತನೆಯ ತಾತ್ವಿಕತೆಯನ್ನು ಕಂಡುಕೊಳ್ಳುವುದು ಸಾಧ್ಯವಾಗುತ್ತದೆ. ಅಲ್ಲದೆ ಇದು ಮೇಲು ನೋಟಕ್ಕೆ ಕಾಣುವಷ್ಟು ಏಕ ಪ್ರಕಾರವಾದುದಾಗಿರದೆ ಅನೇಕ ವೈವಿಧ್ಯಗಳನ್ನು ಅಂತಃವಿರೋಧಗಳನ್ನು ತನ್ನೊಳಗೆ ಹೊಂದಿರುತ್ತದೆ. ಅವುಗಳನ್ನು ಗುರುತಿಸಲು ಇಂತಹ ತೌಲನಿಕ ಚರ್ಚೆಯು ನೆರವಾಗುತ್ತದೆ. ರಾಜಕೀಯ ಪರಿಸರ ಕಾರಣವಾಗಿ ದೃಷ್ಟಿಕೋನದ ವಿಭಿನ್ನತೆಗಳು ಮೈದಳೆಯಬಹುದು. ಉದಾ: ಬ್ರಿಟಿಷ್ ನೇರ ಆಡಳಿತದಲ್ಲಿದ್ದು, ಅವರ ಶೋಷಣೆ ಮತ್ತು ಸ್ವಾತಂತ್ರ್ಯ ಹೋರಾಟದ ಬಿಸಿಗಳೆರಡನ್ನು ಅನುಭವಿಸಿದ ಉತ್ತರ ಕರ್ನಾಟಕದ ಕವಿಗಳ ಧೋರಣೆಗಳಿಗೂ ಸ್ವಲ್ಪ ಮಟ್ಟಿಗಾದರೂ ಪ್ರಜಾಹಿತ ಚಿಂತಕನಾದ ರಾಜನೊಬ್ಬನ ಪ್ರಜಾವಲಯದಲ್ಲಿ ಬರೆಯುತ್ತಿದ್ದ ಹಳೆಯ ಮೈಸೂರಿನ ಸಾಹಿತ್ಯದ ವಾತಾವರಣಕ್ಕೂ ಮುಖ್ಯವಾದ ವ್ಯತ್ಯಾಸಗಳಿರುವುದು ಸಹಜ.

ಅಂತಿಮವಾಗಿ ಆಂತರಿಕ, ರಾಷ್ಟ್ರೀಯ, ಅಂತರಾಷ್ಟ್ರೀಯ ನೆಲೆಗಳಿಂದ ಕನ್ನಡ, ಕರ್ನಾಟಕತ್ವಗಳು ಎದುರಿಸುತ್ತಿರುವ ಸಮಕಾಲೀನ ಸಂದರ್ಭದ ಆತಂಕಗಳು ಹಿಂದೆಂದಿಗಿಂತಲೂ ಇಂದು ವ್ಯಾಪಕವಾಗಿವೆ. ಆಳವಾಗಿದೆ ಮತ್ತು ಸಂಕೀರ್ಣ ಸ್ವರೂಪವನ್ನು ಪಡೆದಿದೆ. ರಾಜ ಪ್ರಭುತ್ವ ಪರಕೀಯ ಪ್ರಭುತ್ವ ಮತ್ತು ಪ್ರಜಾಪ್ರಭುತ್ವ ಈ ೩ ಘಟ್ಟಗಳಲ್ಲಿ ಹಾದು ಬಂದಿರುವ ಕನ್ನಡ–ಕರ್ನಾಟಕತ್ವವು ವಿವಿಧ ಕಾಲಮಾನಗಳಲ್ಲಿ ವಿವಿಧ ರೂಪದ ಸಾಂಸ್ಕೃತಿಕ ಧಾಳಿಗಳನ್ನು ಎದುರಿಸಿದೆ. ಇಂತಹ ಉಸಿರುಕಸಿತ ಸ್ಥಿತಿಯ ಕನ್ನಡದ ನೆಲೆಯನ್ನು ಎಚ್ಚರಿಕೆಯ ಪ್ರಜ್ಞೆಯಿಂದ ಗಮನಿಸಬೇಕಾದ ಅಗತ್ಯತೆಯನ್ನು ಅಧ್ಯಯನವು ಪರಿಶೀಲಿಸುತ್ತದೆ.

---

೧. ಕನ್ನಡಲ್ಲಿ ಭಾವಗೀತೆ: ಡಾ. ಪ್ರಭುಶಂಕರ

೨. ಹಾಡೇ ಹಾದಿಯ ತೋರಿತು – ಹೆಚ್.ಎಸ್. ರಾಘವೇಂದ್ರರಾವ್, ಪುಟ ೫೫

# ಅಧ್ಯಾಯ ೨

## ಕನ್ನಡ ಕಾವ್ಯ ಮತ್ತು ನಾಡು, ನುಡಿ, ಚಿಂತನೆ

ಕಾವ್ಯವನ್ನು ಮುಖ್ಯ ಭಿತ್ತಿಯಾಗಿಸಿಕೊಂಡ ಕನ್ನಡ ನಾಡು-ನುಡಿಗಳ ಚಿಂತನಾ ಸ್ವರೂಪದ ವ್ಯಾಪ್ತಿ ಅಧಿಕೃತ ಕನ್ನಡ ಸಾಹಿತ್ಯ ಪರಂಪರೆಯಷ್ಟೇ ವಿಸ್ತಾರವನ್ನು ಪಡೆದದ್ದಾಗಿದೆ.

ಸಂಸ್ಕೃತಿಯ ಪ್ರಾಣ ಸ್ವರೂಪಿಯಾದ ಭಾಷೆಯ ಮೂಲಕ ಸಮಾಜದ ಅನನ್ಯತೆಯು ರೂಪು ತಳೆಯುತ್ತದೆ. ಈ ಹಿನ್ನೆಲೆಯಲ್ಲಿ ಕನ್ನಡ ಸಂಸ್ಕೃತಿಯ ವಿಕಾಸ ಕನ್ನಡ ಭಾಷೆಯಿಂದ ಮಾತ್ರ ಸಾಧಿತಗೊಳ್ಳುವ ಸತ್ಯ ಎಂಬುದು ಅರಿವಾಗುತ್ತದೆ. ಭೀಮ ಕವಿಯು ಹೇಳುವಂತೆ,

'ಲೇಸೆನಿಪ ಕನ್ನಡ ಭಾಷೆಯಂದೆನಲಾಗದಿಳೆಗಿದು,

ಲೇಸೆನಿಪ ವೇದ ಪ್ರಮಾಣದ ಭಾಷೆಯನಿಪುದು.'

ನಾಡು ಎಂಬುದು ಒಂದು ನಿರ್ದಿಷ್ಟ ಸಾಂಸ್ಕೃತಿಕ ಭೌಗೋಳಿಕ ವಲಯವಾಗಿ ಪರಂಪರೆಯಲ್ಲಿ ಅಸ್ತಿತ್ವ ಪಡೆದಿದ್ದು, ಭಾರತಕ್ಕೆ ಬ್ರಿಟಿಷರ ಆಗಮನವಾಗಿ ಅವರಿಂದ ಇಲ್ಲಿ ವಸಾಹತುಶಾಹಿ ಸಂಸ್ಕೃತಿ ಮೈ ತಾಳಿದಾಗ ಈ ನಾಡಿನ ಕಲ್ಪನೆ ಮಹತ್ತರ ತಿರುವನ್ನು ಪಡೆಯುತ್ತದೆ. ವಸಾಹತು ಕಾಲದಲ್ಲಿ ಕಾಣಿಸಿಕೊಂಡ ಹಲವು ನೂತನ ಕಲ್ಪನೆಗಳಲ್ಲಿ ಒಂದಾದ ಇದು ಭಾಷಾವಾರು ಪ್ರಾಂತ್ಯಗಳ ರಚನೆಗಾಗಿ ನಡೆದ ಕರ್ನಾಟಕ ಏಕೀಕರಣ ಚಳುವಳಿಯ ತೀವ್ರತೆಯಲ್ಲಿ ಜಾಗೃತಗೊಳ್ಳುತ್ತದೆ. ಈಗಾಗಲೇ ಇದ್ದ ಈ ಪ್ರಾಚೀನ ನಾಡಿನ ಕಲ್ಪನೆ ಇಲ್ಲಿ ತನ್ನ ವ್ಯಾಪ್ತಿಯನ್ನು ಹಿಗ್ಗಿಸಿಕೊಳ್ಳುತ್ತದೆ. ಉದಾ: ಕನ್ನಡನಾಡು, ತಮಿಳುನಾಡು... ಭಾರತೀಯ ಪರಂಪರೆಯುದ್ದಕ್ಕೂ ಮುಖ್ಯವಾಗಿ ಸಾಂಸ್ಕೃತಿಕ ಪರಿಕಲ್ಪನೆಯಾಗಿ ಉಳಿದು ಬಂದಿದ್ದ ನಾಡು ಎಂಬುದು ಇಪ್ಪತ್ತರ ಶತಮಾನದಲ್ಲಿ ರಾಜಕೀಯ ಛಾಯೆಯನ್ನು ಪಡೆಯುತ್ತದೆ.

ಕನ್ನಡ ಕಾವ್ಯವು ಕ್ರಿಯಾಶೀಲವಾಗುತ್ತಾ ಸಾವಿರ ವರ್ಷಗಳ ಪರಂಪರೆಯನ್ನು ಮುಂದುವರೆಸಿದೆ. ಈ ಕಾಲದ ನೆಲೆಯಲ್ಲಿ ಕನ್ನಡ ಪರ ಚಿಂತನ ಸ್ವರೂಪದ ಅವಸ್ಥಾಂತರಗಳನ್ನು ತನ್ನ ಒಡಲಲ್ಲಿ ಹುದುಗಿಸಿಕೊಂಡಿದೆ. ಇದನ್ನು ಅರಿಯುವ ಈ ಅಧ್ಯಯನದ ಪ್ರಯತ್ನದಲ್ಲಿ ಕೆಲವು ಮುಖ್ಯ ಕವಿಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ. ಕವಿರಾಜಮಾರ್ಗಕಾರ ಪಂಪನಿಂದ ಮೊದಲ್ಗೊಂಡು ಮುದ್ದಣನವರೆಗಿನ ಅಧ್ಯಯನದ ಸಂಧರ್ಭಲ್ಲಿ ಆಯಾ ಕವಿಗಳ ಕೃತಿಗಳಲ್ಲಿ ವ್ಯಕ್ತವಾಗಿರುವ ಕನ್ನಡ ನಾಡು-ನುಡಿಗಳ ಚಿಂತನಾ ಸ್ವರೂಪ ಮತ್ತು ಅದಕ್ಕೆ ಹಿನ್ನೆಲೆಯಾದ ಸಾಂಸ್ಕೃತಿಕ ಒತ್ತಡಗಳನ್ನು ಸ್ಥೂಲವಾಗಿ ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ಕವಿರಾಜಮಾರ್ಗಕಾರ ಕನ್ನಡಕ್ಕೊಂದು ಶಾಸ್ತ್ರ ರಚನೆ ಮಾಡುವ ಕನ್ನಡಾಭಿಮಾನದ ಕೈಂಕರ್ಯದ ಮೂಲಕ ಕನ್ನಡ ಕಾವ್ಯ ಪರಂಪರೆಗೆ ಹೊಸ ದಿಕ್ಕನ್ನು ತೋರುತ್ತಾನೆ. ಕಾವೇರಿ–ಗೋದಾವರಿಗಳ ನಡುವಿನ ಭೌಗೋಳಿಕ ಕನ್ನಡದಲ್ಲಿನ ದೇಸಿ ಬೇರೆ ಬೇರೆಯಾದ ಭಾಷಿಕ ವೈವಿಧ್ಯವನ್ನು ಈತ ಗುರುತಿಸುತ್ತಾನೆ. ತಿರುಳ್ಗನ್ನಡವನ್ನು ಪ್ರತಿಪಾದಿಸುತ್ತಾನೆ. ಆ ಮೂಲಕ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಶಾಸ್ತ್ರೀಯ ನೆಲೆಗಟ್ಟನ್ನು ರೂಪಿಸುತ್ತಾನೆ. ಕನ್ನಡ ಕಾವ್ಯ ಪರಂಪರೆ, ಪ್ರಾದೇಶಿಕ ಭಾಷೆ ವೈವಿಧ್ಯಗಳ ಸೂಚನೆ, ಕನ್ನಡಿಗರ ಗುಣಸ್ವಭಾವ, ವ್ಯಾಕರಣ, ಛಂದಸ್ಸು, ಅಲಂಕಾರ, ಕರ್ನಾಟಕದ ಭೌಗೋಳಿಕ ಗಡಿ ಹೀಗೆ ಹಲವು ಕನ್ನಡ ಸಂಬಂಧಿ ವಿಚಾರಗಳಿಂದ ಕವಿರಾಜಮಾರ್ಗ ಚಾರಿತ್ರಿಕ ಕೃತಿಯಾಗಿ ಮುಖ್ಯವಾಗುತ್ತದೆ.

ಸಂಸ್ಕೃತ ಮತ್ತು ಕನ್ನಡ ಉಭಯ ಭಾಷಾ ಪಾಂಡಿತ್ಯವನ್ನು ಗಳಿಸಿ ತಮ್ಮ ಸೃಜನಶೀಲತೆಯ ಅಭಿವ್ಯಕ್ತಿಗಾಗಿ ಕನ್ನಡವನ್ನು ಆರಿಸಿಕೊಂಡ ನಮ್ಮ ಪ್ರಾಚೀನ ಕವಿಗಳ ನಿಲುವು ಅವರ ದಟ್ಟ ಕನ್ನಡ ನಾಡು ನುಡಿಗಳ ಅಭಿಮಾನವೂ ಹೌದಾಗುತ್ತದೆ.

**ಪಂಪ:** ಆದಿಕವಿ ಪಂಪನ ಎರಡು ಕೃತಿಗಳಲ್ಲಿ ಮಾರ್ಗ ದೇಸಿ ಸತ್ವಗಳ ಸಾಂಸ್ಕೃತಿಕ ನೆಲೆಯ ಅಭಿವ್ಯಕ್ತಿಯಿದೆ. ಪಂಪನ ಕ್ರಿಯಾಶೀಲವಾದ ನಿಸರ್ಗದ ಪ್ರೀತಿಯಲ್ಲಿ ನಾಡಿನ ಅಭಿಮಾನದ ಹಿನ್ನಲೆಯ ಮುಖ್ಯ ಕಾಳಜಿಯಿದೆ. ಅರಿಕೇಸರಿಯನ್ನು ಅರ್ಜುನನ್ನಾಗಿಸುವಲ್ಲಿನ ಸಮೀಕರಣ ನಾಡಿನ ಬಗೆಗಿನ ಚಾರಿತ್ರಿಕ ಪ್ರಜ್ಞೆಯಾಗಿಯೂ ಚಿಂತನಾರ್ಹ. ಪಂಪನ ಕಾಲದ ಯುಗ ಧರ್ಮವಾದ ದೇಶಾಭಿಮಾನವು ಕವಿಯ ಧರ್ಮವೂ ಆಗಿರುವುದು ಪಂಪನ ವಿಶೇಷವಾಗಿದೆ.

ಯಾರ ಅಂಕುಶಕ್ಕೂ ಹೆದರದೆ ಬನವಾಸಿಯನ್ನು ನೆನೆದೇ ತೀರುವ ಭಾವ ತೀವ್ರತೆ, ತ್ಯಾಗ, ಭೋಗ, ಅಕ್ಕರ, ಗೇಯ ಗೊಟ್ಟಿಗಳ ಆಗರದಲ್ಲಿ ಮರಿದುಂಬಿ ಇಲ್ಲವೇ ಕೋಗಿಲೆಯಾಗಿ ಜನ್ಮ ಸಾರ್ಥಕ್ಯ ಪಡೆಯುವ ಹಂಬಲದಲ್ಲಿ ತೆಂಕನಾಡನ್ನು ಮರೆಯಲಾಗದ ಸ್ಥಾಯಿತ್ವದ ಆದಿ ಕವಿ ಹೃದಯದ ನಾಡಿನ ಅಭಿಮಾನವು ಅನನ್ಯವೆನಿಸುತ್ತದೆ.

**ನಯಸೇನ:** ಸಾಮಾಜಿಕ ಸಂದರ್ಭದ ಒತ್ತಡದಿಂದ ಧಾರ್ಮಿಕ ಅಗತ್ಯವಾಗಿ ಮೂಡಿ ಬಂದ ನಯನಸೇನನ ಧರ್ಮಾಮೃತದಲ್ಲಿ ನಾಡು ನುಡಿ ಚಿಂತನೆಯೂ ಧಾರ್ಮಿಕ ನೆಲೆಗಟ್ಟಿನಲ್ಲಿ ಪ್ರಕಟವಾಗುತ್ತದೆ. ಶುದ್ಧ ಸಂಸ್ಕೃತ ಇಲ್ಲವೆ ಶುದ್ಧ ಕನ್ನಡವನ್ನು ಪ್ರತಿಪಾದಿಸುವ ನಯಸೇನ ಮಸುಕಿದ ಸಂಸ್ಕೃತ ಬಳಕೆಯ ಅನೌಚಿತ್ಯವನ್ನು ಟೀಕಿಸಿ ನಮ್ಮ ಕೆಲವು ಕವಿಗಳ ಅತಿಯಾದ ಮೋಹವನ್ನು ಛೇಡಿಸುತ್ತಾನೆ. ಪಂಪನ ಅತ್ಯುಗ್ರ ಅಭಿಮಾನವನ್ನು ಈತನಲ್ಲಿ ಕಾಣಲಾಗದಿದ್ದರೂ

೧೨ನೇ ಶತಮಾನದ ಸಂಕೀರ್ಣ ಕರ್ನಾಟಕವನ್ನು ಅದರೆಲ್ಲಾ ಸಾಂಸ್ಕೃತಿಕ ಆಯಾಮಗಳೊಂದಿಗೆ ಕವಿ ಕಟ್ಟುಕೊಡುತ್ತಾನೆ.

**ಆಂಡಯ್ಯ:** ೧೩ನೇ ಶತಮಾನದ ಪೂರ್ವಾರ್ಧದಲ್ಲಿ ಸಂಸ್ಕೃತದ ನೆರವಿಲ್ಲದೆ ಕನ್ನಡದಲ್ಲಿ ಕಾವ್ಯ ರಚನೆ ಅಸಾಧ್ಯ ಎಂಬ ಧೋರಣೆಯನ್ನು ಹೊಂದಿದ್ದ ಕವಿಗಳ ಮಧ್ಯೆ ತನ್ನ "ಕಬ್ಬಿಗರ ಕಾವ್ಯ" ಕೃತಿಯ ಮೂಲಕ ಅಚ್ಚಗನ್ನಡದಲ್ಲಿ ಕಾವ್ಯ ಕೃಷಿಯ ಸಾಧನೆ ಮಾಡಿದವನು ಆಂಡಯ್ಯ ಆದಿಶೇಷನಿಂದಲೂ ಬಣ್ಣಿಸಲಾಗದ ಕನ್ನಡವೆನಿಪ್ಪ ಚೆಲುವಾದ ನಾಡನ್ನು ಆರಾಧನಾ ಹೃದಯದಿಂದ ಬಣ್ಣಿಸುತ್ತಾನೆ. ಪ್ರಕೃತಿಗೆ ಪರವಶನಾಗುತ್ತಾನೆ. ಪೂವಿನ ಪೊಳಲಿನಲ್ಲಿ ಕರ್ನಾಟಕದ ವೈಭವದ ಪರಿಪೂರ್ಣತೆಯನ್ನು ತಂದುಕೊಡುತ್ತಾನೆ. ನಾಡನ್ನು ಕುರಿತಾದ ಅಭಿಮಾನ ಮತ್ತು ಚಿಂತನೆಯ ನೆಲೆಯಲ್ಲಿ ಪಂಪನನ್ನು ಬಿಟ್ಟರೆ ಆಂಡಯ್ಯನೇ ಕಣ್ಣಿಗೆ ಕಟ್ಟಿ ಮನಸ್ಸಿಗೆ ಮುಟ್ಟುವವನು.

**ವಚನಕಾರರು:** ಮಾರ್ಗ ದೇಸಿಗಳ ಸಮನ್ವಯ ರೂಪದಲ್ಲಿ ಪ್ರವಹಿಸುತ್ತಿದ್ದ, ರಾಜಾಶ್ರಯ ಪ್ರೇರಿತ ಕನ್ನಡ ಸಾಹಿತ್ಯವನ್ನು ತೀವ್ರವಾಗಿ ಕನ್ನಡ ಪರವಾಗಿಸಿ ಜನಮುಖಿಗೊಳಿಸಿದ ವಚನಕಾರರು ಕನ್ನಡದ ಸಂಧರ್ಭದಲ್ಲಿ ಕನ್ನಡ ನುಡಿಯ ಬಗ್ಗೆ ಯಾವುದೇ ಅಧಿಕೃತ ಘೋಷಣೆ ಮಾಡದೆ ಮೊಟ್ಟ ಮೊದಲಿಗೆ ಚಿಂತನೆ ನಡೆಸುತ್ತಾರೆ.

ದೇವವಾಣಿಗೆ ಜನವಾಣಿಯಾಗಿರುವುದು ಅಸಾಧ್ಯವಾದಾಗ "ಜನವಾಣಿಯನ್ನು ದೇವವಾಣಿಯ ಮಟ್ಟಕ್ಕೂ ಏರಿಸಿದ ಪವಾಡ ಕನ್ನಡ ವೀರಶೈವ ವಚನಕಾರರದು" ಎಂದು ಬಸವನಾಳರು ಅಭಿಪ್ರಾಯಿಸಿದ್ದಾರೆ.

ಕನ್ನಡದ ಮೂಲಕ ತಾತ್ವಿಕ ವಿಚಾರಗಳನ್ನು ಮಂಡಿಸುವಾಗ ಸಂಸ್ಕೃತದ ಬಗೆಗಿನ ಪ್ರೇಮವನ್ನಾಗಲೀ, ದ್ವೇಷವನ್ನಾಗಲೀ ಸಾಮಾನ್ಯವಾಗಿ ಪ್ರಕಟಿಸದೆ ಸಂಸ್ಕೃತದ ಉಪನಿಷತ್ತುಗಳ ಸ್ವೀಕೃತ ವಿಚಾರ ಸಂಸ್ಕೃತ ತಾತ್ವಿಕತೆಯ ಪರಿಶೀಲನೆ ಅದರ ಕೆಲವು ಸೂಕ್ತ ಶ್ಲೋಕ ಮತ್ತು ಕಾವ್ಯ ಬರಹಗಳ ನೇರ ಬಳಕೆ ಮತ್ತು ಅದರ ಹಲವಾರು ಪದಗಳ ಬಳಕೆ ಈ ಎಲ್ಲಾ ಹಿನ್ನೆಲೆಗಳಿಂದ ತಮ್ಮ ವಚನಗಳನ್ನು ಪ್ರತಿಪಾದಿಸುತ್ತಾರೆ. ಈ ಬಗೆಯ ಕನ್ನಡ–ಸಂಸ್ಕೃತಗಳ ಸಂಬಂಧದ ಸ್ವರೂಪ ಕನ್ನಡದ ಸಂದರ್ಭಗಳಲ್ಲಿ ಇಲ್ಲಿಯೇ ಮೊದಲು ವ್ಯಕ್ತವಾದದ್ದು. ಆದರೆ ವೈದಿಕಕ್ಕೆ ಪ್ರತಿಯಾಗಿ ನಿಂತ ಶರಣ ಧರ್ಮವು ಸಂಸ್ಕೃತವನ್ನು ದೇಸಿ ನೆಲೆಯಲ್ಲಿ ನಿರಾಕರಿಸಿತು.

ಸಾಹಿತ್ಯೇತರ ಮತ್ತು ಜನಪರ ಉದ್ದೇಶದಿಂದ ಹುಟ್ಟಿಕೊಂಡ ವಚನಗಳು ಸಾಹಿತ್ಯದ ಗುಣವನ್ನು ಹೊಂದಿದ್ದರಿಂದ ಕನ್ನಡದ ಪರಂಪರೆಯಲ್ಲಿ ಮೊದಲಿಗೆ ಕನ್ನಡ ಕರ್ನಾಟಕತ್ವವನ್ನು ಮೈಗೂಡಿಸಿಕೊಂಡ ಸಾಹಿತ್ಯ ಪ್ರಕಾರವೆನಿಸಿತು. ಸಂಸ್ಕೃತವು ಕೇವಲ ಜ್ಞಾನನಿಧಿ ಎನಿಸದೆ

ಪ್ರಭುತ್ವದ ವೈದಿಕಶಾಹಿಯು, ಭಾವಶಾಹಿಯು ವೇಷ ಧರಿಸಿ ದೇಶೀ ಸಂಸ್ಕೃತಿಯ ಮೇಲೆ ಆಕ್ರಮಣವನ್ನು ತಳೆದಾಗ ಅದನ್ನು ವಚನಕಾರರು ಪ್ರತಿಭಟಿಸುತ್ತಾರೆ.

ವಚನಕಾರರಲ್ಲಿ "ನಾಡು" ಎಂಬುದು ರಾಜಕೀಯ ಕೇಂದ್ರವಾಗಿ ನಿರ್ದಿಷ್ಟ ಸಾಂಸ್ಕೃತಿಕ ಭೂ ವಲಯವಾಗಿ ತನ್ನದೇ ಆದ ಮೇರೆಗಳನ್ನು ಸೃಷ್ಟಿಸಿಕೊಂಡ ಪ್ರಾಕೃತಿಕ ನೆಲೆಯಾಗಿ ಕಾಣಿಸುತ್ತದೆ.

"ರುದ್ರಲೋಕವೇ ಮರ್ತ್ಯಕ್ಕಿಳಿತಂದು ಕಲ್ಯಾಣಪುರವಾಗಿ ಹುಟ್ಟಿತ್ತು ನೋಡಿರಯ್ಯ, ಜಡರುಗಳ ಮನದ ಕತ್ತಲೆಯ ಕಳೆಯಬೇಕೆಂದು ಹುಟ್ಟಿತ್ತು ಕಲ್ಯಾಣ" ನಾಡಿನ ಮೂರ್ತ ಕಲ್ಪನೆಗಿಂತ ಅನುಭಾವಿ ನೆಲೆಯ ಕಲ್ಪನೆಯೇ ಮುಖ್ಯ ಎನಿಸುತ್ತದೆ.

ವಚನಕಾರರು ನೋಡಿದ ಮತ್ತು ಕಟ್ಟ ಬಯಸಿದ ನಾಡು ಧಾರ್ಮಿಕ, ನೈತಿಕ ನೆಲೆಗಳಲ್ಲಿ ವಿಕಾಸಗೊಳ್ಳುತ್ತಾ ಸಾಗಿ ಅಂತಿಮವಾಗಿ ವಿಶ್ವಾತ್ಮಕ ನೆಲೆಗೆ ಏರುತ್ತದೆ. ಇದಕ್ಕೆ ಪೂರಕವಾಗಿ ಇದು ವ್ಯಕ್ತಿ ಕೇಂದ್ರಿತ ಸಮಷ್ಟಿ ಕೇಂದ್ರಿತ ನೆಲೆಯಲ್ಲಿ ಮತ್ತು ಅದರ ಅಂತರಂಗ ಬಹಿರಂಗಗಳಲ್ಲೂ, ಕ್ರಿಯಾಶೀಲವಾಗಿ ಇಡೀ ಕನ್ನಡ ಸಾಹಿತ್ಯದಲ್ಲಿ ನಾಡಿನ ಕಲ್ಪನೆ ಅತ್ಯಂತ ವಿಶಿಷ್ಟ ಅನಿಸಿಬಿಡುತ್ತದೆ.

ಹಲವು ಪ್ರಾದೇಶಿಕ ನೆಲೆಗಳಿಂದ ಅನುಭವ ದ್ರವ್ಯವನ್ನು ಸಂಪಾದಿಸಿದರೂ ಅವನ್ನು ತತ್ವ ಪದಗಳ ಮೂಲಕ ಅಭಿವ್ಯಕ್ತಿಸುವಾಗ ತನ್ನ ಪ್ರಾದೇಶಿಕ ಮೂಲ ನೆಲೆಯ ಐಡೆಂಟಿಟಿಯನ್ನು ತಪ್ಪದೇ ದಾಖಲಿಸುವುದು ನಾಡು–ನುಡಿಗಳ ವಿಚಾರದ ದೃಷ್ಟಿಯಿಂದ ಅತ್ಯಂತ ಮುಖ್ಯ ಎನಿಸಿದೆ.

**ಹರಿಹರ:** ಕನ್ನಡ ನಾಡು–ನುಡಿಗಳನ್ನು ಕುರಿತಂತೆ ಹರಿಹರನಲ್ಲಿ ಯಾವುದೇ ಪ್ರತ್ಯಕ್ಷ ಘೋಷಣೆ ಕಾಣುವುದಿಲ್ಲ. ಆದರೆ ತನ್ನ ಇಡೀ ಕಾವ್ಯದಲ್ಲಿ ಕನ್ನಡತನವನ್ನು ಜಾಗೃತಗೊಳಿಸಿದ್ದಾನೆ. ತನ್ನ ಕಾವ್ಯಕ್ಕೆ ಹಂಪೆಯನ್ನು ಕಥಾಭೂಮಿಕೆಯನ್ನಾಗಿ ಮಾಡಿ ತನ್ನ ಸೃಜನಶೀಲ ಅಭಿವ್ಯಕ್ತಿಗೆ ದೇಸಿ ಛಂದಸ್ಸಾದ ರಗಳೆಯನ್ನು ಪೂರ್ಣ ಪ್ರಮಾಣದಲ್ಲಿ ಬಳಸಿ ಕನ್ನಡ ಕಾವ್ಯ ಪರಂಪರೆಯಲ್ಲಿ ಒಂದು ಮೈಲಿಗಲ್ಲನ್ನು ನಿರ್ಮಿಸುತ್ತಾನೆ. ರಳ, ಕುಳ, ಕ್ಷಳಗಳ ಉಚ್ಛಾರಣಾ ವಿಧಾನದಲ್ಲಿ ಗೊಂದಲವನ್ನು ಮೀರಿ ಅದನ್ನು ಏಕ ಉಚ್ಛಾರಣಾ ವಿಧಾನದಲ್ಲಿ ಬಳಕೆ ಮಾಡಿದ್ದು, ಅಂದಿನ ಕನ್ನಡ ಭಾಷೆಯ ಬಗೆಗೆ ಈತನಿಗಿರುವ ಕವಿಯ ಸೂಕ್ಷ್ಮತೆ ಮತ್ತು ಸೂಕ್ಷ್ಮ ಸಂವೇದನಾಶೀಲತೆಗಳನ್ನು ದೃಢಪಡಿಸುತ್ತದೆ.

**ನಂಜುಂಡ ಕವಿ:** ನಂಜುಂಡ ಕವಿಯು ತನ್ನ ಕಾವ್ಯಕ್ಕೆ ಚಾರಿತ್ರಿಕ ವಸ್ತುವನ್ನು ಸ್ವೀಕರಿಸಿ, ಅದಕ್ಕೆ ಮಹತ್ತನ್ನು ಉಂಟು ಮಾಡುವ ನಿಟ್ಟಿನಲ್ಲಿ ಪೌರಾಣಿಕ ಛಾಯೆಯನ್ನು ಮೀರಿ, ಅದನ್ನು ಕರ್ನಾಟಕದ ನೆಲೆಯಲ್ಲಿ ಅರಳಿಸುವ ಕಲೆ ಅವನ ಚಾರಿತ್ರಿಕ ಪ್ರಜ್ಞೆ ಮತ್ತು ತನ್ನ ನಾಡನ್ನು ಕುರಿತ

ಪ್ರಜ್ಞೆ ಹಾಗೂ ಅಭಿಮಾನಕ್ಕೆ ದ್ಯೋತಕವನ್ನಾಗಿಸುತ್ತದೆ. ಇಂತಹ ಕಾವ್ಯಕ್ಕೆ ಕನ್ನಡ ದೇಸಿ ಛಂದಸ್ಸನ್ನು ಅಳವಡಿಸಿರುವುದು ಕನ್ನಡ ನುಡಿ ಸ್ವರೂಪದ ಬಗೆಗೆ ವಹಿಸಿದ ಆಸಕ್ತಿ ಎನಿಸುತ್ತದೆ.

ಸುಮಾರು ೩೫೦ ಪದ್ಯಗಳಲ್ಲಿ ನಾಡಿನ ವರ್ಣನೆಯನ್ನು ಮಾಡುತ್ತಾನೆ. ಕಾವ್ಯ ಕೇಂದ್ರದ ನೆಲೆಯಾದ ಹೊಸ ಮಲೆದುರ್ಗವನ್ನು ೧೨೧ ಪದ್ಯಗಳಲ್ಲಿ ವರ್ಣಿಸುತ್ತಾನೆ.

"ತರುಣನೆಮ್ಮನು ಬಿಟ್ಟು ಪರದೇಶದೊಳು ತರಿಹರಿಸಬಲ್ಲನೇ ನಮ್ಮ ತಾಯಿ" ಎಂದು

ಆತ್ಮೀಯ ಅಭಿಮಾನ ತೋರುತ್ತಾನೆ. ಕರ್ನಾಟಕ ಸಂಸ್ಕೃತಿಯ ಮೌಲಿಕ ಗುಣಗಳನ್ನು ಕುಮಾರ ರಾಮನ ಪಾತ್ರದಲ್ಲಿ ಶ್ರೇಷ್ಠಗೊಳಿಸಿದ್ದಾನೆ. ದೆಹಲಿಯ ಸುಲ್ತಾನರ ಪ್ರಭುತ್ವ, ಧರ್ಮ ಮತ್ತು ಭಾಷೆಗಳು ಏಕಕಾಲಕ್ಕೆ ಮಾಡಿದ ದಾಳಿಯನ್ನು ಎದುರಿಸಲು ಹಿಂದೂ ಧರ್ಮ ಮತ್ತು ಕನ್ನಡ ಭಾಷೆಗಳನ್ನೊಳಗೊಂಡ ಕರ್ನಾಟಕತ್ವವೂ ಪ್ರಭುತ್ವದಲ್ಲಿ ಜಾಗೃತವಾದುದಾದರ ಸುಳಿವು ಕುಮಾರ ರಾಮನ ಕತೆಯಲ್ಲಿಯೂ ದೊರೆಯುತ್ತದೆ.

ಕುಮಾರರಾಮನಲ್ಲಿ ಕನ್ನಡ ಸಂಸ್ಕೃತಿಯ ಆದರ್ಶಗಳನ್ನು ತುಂಬಿ ಕಟ್ಟಿದ ರಾಮನಾಥ ಚರಿತೆ ಮತ್ತು ಅದರಲ್ಲಿ ಮೂಡಿಸಿರುವ ಕರ್ನಾಟಕತ್ವದ ನೆಲೆಗಳ ಅಭಿವ್ಯಕ್ತಿಯ ದೃಷ್ಟಿಯಿಂದ ನಂಜುಂಡಕವಿ ಇಂದಿಗೂ ಪ್ರಸ್ತುತತೆಯನ್ನು ಪಡೆದಿದ್ದಾನೆ.

**ಮಹಲಿಂಗರಂಗ:** ಕನ್ನಡದ ಮೂಲಕವೂ ಮುಕ್ತಿ ಸಂಪಾದನೆ ಸಾಧ್ಯವೆಂದು ನಂಬಿದ್ದ ಅನುಭಾವಿ ಕವಿ ಮಹಲಿಂಗರಂಗ ತನ್ನ ಧಾರ್ಮಿಕ ನೆಲೆಗಟ್ಟಿನಲ್ಲಿ ಅತ್ಯಂತ ಪ್ರಾಮಾಣಿಕವಾಗಿ ತಾನು ನಂಬಿದ ತಾತ್ವಿಕ ಚಿಂತನೆಯನ್ನು ಕನ್ನಡದ ಮೂಲಕ ಹರಿಯಬಿಡುತ್ತಾನೆ. ಸಂಸ್ಕೃತದ ಅದ್ವೈತದ ಅನೇಕ ಸೂಕ್ಷ್ಮ ವಿಚಾರಗಳನ್ನು ಕನ್ನಡದಲ್ಲಿಯೂ ಹೇಳಲು ಸಾಧ್ಯ ಎಂದು ಅದರ ಶಕ್ತಿ ಸಾಮರ್ಥ್ಯಗಳನ್ನು ತೋರಿ ಕನ್ನಡದ ಬಗೆಗೆ ನೈಜ ಪ್ರಜ್ಞೆಯನ್ನು ಮೆರೆದಿದ್ದಾನೆ. ಸುಲಿದ ಬಾಳೆ ಹಣ್ಣಿನಂದದ ಕನ್ನಡದಲ್ಲಿ ಕಾವ್ಯ ಮುಕ್ತಿ ದೊರಕಿಸಿದ ಕವಿ ಸಂಸ್ಕೃತದೊಳಿನ್ನೇನು ಎಂಬ ನೆಲೆಗೆ ಬರುತ್ತಾನೆ.

**ಮುದ್ದಣ:** ಜಡ್ಡುಗಟ್ಟುತ್ತಾ ಬಂದ ಹಳೆಯ ಕನ್ನಡ ಸಾಹಿತ್ಯವಾಹಿನಿಗೆ ಜೀವಂತಿಕೆಯನ್ನು ತುಂಬಿ ಅದಕ್ಕೆ ಹೊಸ ದಿಕ್ಕನ್ನು ತೋರಿದ ಮುದ್ದಣನು ಕನ್ನಡ ನುಡಿಯ ಬಗೆಗಿನ ಚರ್ಚೆಯಲ್ಲಿ ಪ್ರಾಥಮಿಕವಾಗಿ ಈ ತಾತ್ವಿಕ ಹಿನ್ನೆಲೆಯಲ್ಲಿ ಮುಖ್ಯವೆನಿಸುತ್ತಾನೆ. ತನ್ನ ಪ್ರಾದೇಶಿಕ ಸಂವೇದನೆಗಳನ್ನು ತುಳುನಾಡು, ಕನ್ನಡ ನಾಡು, ಹೀಗೆ ವಿವಿಧ ನೆಲೆಗಳಲ್ಲಿ ಅಭಿವ್ಯಕ್ತಿಸುತ್ತಾ ಹೋಗುತ್ತಾನೆ. ಆ ಮೂಲಕ ತುಳುನಾಡನ್ನು ಒಳಗೊಂಡ ಕರ್ನಾಟಕವನ್ನು ಕಟ್ಟುತ್ತಾನೆ.

ಈ ಅಧ್ಯಯನದಲ್ಲಿ ಗಮನಿಸಿದಂತೆ ವಚನಕಾರರ ನಾಡು–ನುಡಿಗಳನ್ನು ಕುರಿತ ಪ್ರಜ್ಞೆ ವಿಶಿಷ್ಟವಾದ್ದಾಗಿದೆ. ಈ ಎಲ್ಲಾ ಕಾಲಗಳ ಉದ್ದಕ್ಕೂ ಕನ್ನಡದ ಎದುರಿಗೆ ಸಂಸ್ಕೃತ ಕಾಣಿಸಿಕೊಂಡಿದೆ.

ಭಾರತದ ರಾಷ್ಟ್ರೀಯ ಚಳುವಳಿ ಮತ್ತು ಸ್ವಾತಂತ್ರ್ಯದ ಸಾಕಾರತೆಗಳ ಚಾರಿತ್ರಿಕ ಮಹತ್ವದ ಘಟನೆಗಳು ಹಾಗೂ ಇದರ ನೆರಳಿನಲ್ಲಿಯೇ ಉಪ ರಾಷ್ಟ್ರೀಯತೆಯ ನೆಲೆಯ ಪ್ರಾಂತೀಯ ಅವಸ್ಥಾಂತರಗಳು ಆಧುನಿಕ ಕನ್ನಡ ಕಾವ್ಯದ ಬಹುಮುಖೀ ಪ್ರೇರಣೆಯ ನೆಲೆಗಳಾಗಿವೆ. ಇದು ನಾಡು–ನುಡಿ ಚಿಂತನೆಗಳನ್ನು ಮೇಳವಿಸಿಕೊಂಡ ಪ್ರಕ್ರಿಯೆಯೂ ಹೌದು. ರಾಷ್ಟ್ರೀಯ ಹೋರಾಟ ಮತ್ತು ಏಕೀಕರಣ ಚಳುವಳಿಗಳ ಏಕ ಮೂಲದ ಕ್ರಿಯಾತ್ಮಕ ಭಿನ್ನತೆಗಳು ಒಂದೇ ಚಾರಿತ್ರಿಕ ಘಟ್ಟದ ಸಂಭವನೀಯತೆ ಈ ಎರಡು ಪರಿಕಲ್ಪನೆಗಳನ್ನು ಹೆಚ್ಚು ಕಡಿಮೆ ಒಂದೇ ನೆಲೆಯ ಗ್ರಹಿಕೆಗೆ ಅವಕಾಶ ಮಾಡಿಕೊಟ್ಟಿತು. ಸ್ವಾತಂತ್ರ್ಯ ನಂತರದ ಪ್ರಾಂತೀಯ ನಿಲುವುಗಳು ತಾತ್ವಿಕವಾಗಿ ಇನ್ನಷ್ಟು ಗಟ್ಟಿಯಾದುದ್ದನ್ನು ನೋಡಬಹುದಾಗಿದೆ. ಇಂತಹ ರಾಜಕೀಯ ಅನಿವಾರ್ಯತೆಯು ಸಾಂಸ್ಕೃತಿಕ ಹಿನ್ನೆಲೆಯ ಸಂಘಟನಾ ಶಕ್ತಿಯನ್ನು ಗಳಿಸಿಕೊಳ್ಳುವ ಅಗತ್ಯ ಪಡೆದು ವಸಾಹತುಶಾಹಿ ಮೂಸೆಯಿಂದ ಹೊರ ಹೊಮ್ಮಿದ ಹೊಸ ವಿಚಾರಗಳು ಪಾಶ್ಚಾತ್ಯ ಧೋರಣೆಗಳ ಪ್ರಭಾವದಿಂದ ಪ್ರಾಂತೀಯ ಮಟ್ಟದ ಕನ್ನಡ ಸಾಹಿತ್ಯಕ ಸಂದರ್ಭವು ನಾಡು–ನುಡಿ ಸಂಬಂಧಿತ ಚಿಂತನೆಗಳ ಅಭಿವ್ಯಕ್ತಿಗೆ ಕಾರಣವಾಯಿತು.

ವಿಭಿನ್ನ ಭೌಗೋಳಿಕ ಪರಿಸರ ಹಾಗೂ ರಾಜಕೀಯ ವಿಭಾಗ ಕ್ರಮಗಳ ಒತ್ತಡ ತುಡಿತಗಳ ಹಿನ್ನೆಲೆಯಲ್ಲಿ ಆಧುನಿಕ ಕನ್ನಡ ಕಾವ್ಯ ಪರಂಪರೆಯ ನಾಡು–ನುಡಿಗಳ ಬಗೆಗಿನ ಚಿಂತನೆಗಳು ವಿಭಿನ್ನವಾಗಿವೆ.

ಆದಿಲ್ ಶಾಹಿ, ಮರಾಠಿ ಪೇಶ್ವೆ ಹೀಗೆ ವಿವಿಧ ಆಳ್ವಿಕೆಗೊಳಪಟ್ಟ ಉತ್ತರ ಕರ್ನಾಟಕ, ಬ್ರಿಟಿಷ್ ಆಳ್ವಿಕೆಯ ಸಂಧರ್ಭದಲ್ಲೂ ರಾಜ ಪ್ರಭುತ್ವದ ಅಡಿಯಲ್ಲಿದ್ದ ಮೈಸೂರು ಸಂಸ್ಥಾನ, ಹೀಗೆ ಐದು ಪ್ರಮುಖ ಆಡಳಿತ ಘಟಕಗಳಲ್ಲಿ ಹಂಚಿ ಹೋಗಿದ್ದ ಕರ್ನಾಟಕವು ರಾಜಕೀಯವಾಗಿ ಒಂದುಗೂಡುವ ಯೋಚನೆಯನ್ನು ಕನ್ನಡಿಗರಲ್ಲಿ ತಂದಿತು.

ಉತ್ತರ ಕರ್ನಾಟಕದಲ್ಲಿ ಮರಾಠಿ ಭಾಷಿಕ, ಸಾಂಸ್ಕೃತಿಕ ಪ್ರಭಾವಗಳಿಂದ ಕನ್ನಡವನ್ನು ಉಳಿಸಿಕೊಳ್ಳುವುದು ಕಷ್ಟದ ಕೆಲಸವಾಗಿತ್ತು. ವಸಾಹತುಶಾಹಿ ಸಂದರ್ಭದ ಕ್ರೈಸ್ತ ಮಿಷಿನರಿಗಳ ಕನ್ನಡದ ಕೆಲಸ ಆಡಳಿತಾತ್ಮಕವಾಗಿ ಇಂಗ್ಲಿಷ್ ಭಾಷೆ ಚಿಂತನೆಗಳ ಪ್ರಾಬಲ್ಯ, ಶೈಕ್ಷಣಿಕ ಕ್ಷೇತ್ರದಲ್ಲಿನ ಭಿನ್ನ ರೀತಿಯ ಪ್ರಕ್ರಿಯೆಗಳು ಕನ್ನಡಿಗರು ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಯೋಚಿಸುವಂತೆ ಮಾಡಿದವು. ಕನ್ನಡ ಕರ್ನಾಟಕಗಳ ಬಗೆಗಿನ ಚಿಂತನೆಗಳಿಗೆ ಆರಂಭಿಕ ಚಾಲನೆ ದೊರಕಿತು.

ಧರ್ಮದ ಪೌರಾಣಿಕತೆಯ ನೆರವಿಲ್ಲದೆ ನಾಡಿನ ಅಭಿಮಾನದ ಸಂವೇದನೆಗಳು ಸ್ವೀಕೃತವಾಗುತ್ತಿರಲಿಲ್ಲವಾಗಿ, ಭಕ್ತಿಯ ನೆಲೆಯಲ್ಲಿ ದೇವಿ, ಪ್ರೀತಿಯ ನೆಲೆಯಲ್ಲಿ ತಾಯಿಯಾಗಿ ಭುವನೇಶ್ವರಿ, ನಾಡದೇವಿ ಮುಂತಾದ ಪರಿಕಲ್ಪನೆಗಳ ಉಗಮಕ್ಕೆ ಕಾರಣವಾಗಿದೆ.

ಕನ್ನಡವು ಒಂದು ತತ್ವವಾಗಿ ತೀವ್ರತೆಯನ್ನು ಪಡೆದು ಕರ್ನಾಟಕವೂ ಕುವೆಂಪು ನಿರ್ವಚಿಸುವಂತೆ ಮಂತ್ರ, ಶಕ್ತಿ, ತಾಯಿ, ದೇವಿ, ಬೆಂಕಿ, ಸಿಡಿಲಾಗುತ್ತದೆ. ಬೆನಗಲ್ ಅದನ್ನು ಗಾಯಿತ್ರಿ ಮಂತ್ರ ಎಂದು ಸಂಭೋಧಿಸುತ್ತಾರೆ.

ಶಾಂತ ಕವಿಗಳು ಕನ್ನಡಿಗರ ಮನೋ ಚಿಂತನೆಗಳಲ್ಲಿ ಬೇರೂರಿದ್ದ ಪರಕೀಯ ವಿಚಾರ ಧಾರೆಗಳನ್ನು ತೆಗೆದುಹಾಕಿ ಅಲ್ಲಿ ಕನ್ನಡತನವನ್ನು ಹುಟ್ಟುಹಾಕಲು ಅರವತ್ತೈದು ಸ್ವಾತಂತ್ರ್ಯ ಕೃತಿಗಳ ಜೊತೆಗೆ 'ಕನ್ನಡ ದಾಸಯ್ಯ'ನಾಗಿ ತಮ್ಮ ಹಾಡುಗಳ ಮೂಲಕ ಹಾಗೂ ನಟನೆಯ ಮೂಲಕವೂ ನಾಡು-ನುಡಿಗಳ ಬಗ್ಗೆ ಅರಿವು ಮೂಡಿಸಲು ಶ್ರಮಿಸುತ್ತಾರೆ. ಇವರ 'ಶ್ರೀ ವಿದ್ಯಾರಣ್ಯ ವಿಜಯ' ಕನ್ನಡ ಕರ್ನಾಟಕದ ಚಿಂತನೆಗೆ ಪ್ರೇರಣೆ ನೀಡಿದ ಆರಂಭಿಕ ಕೃತಿಯಾಗಿ ಗಮನಾರ್ಹ. ಇದರಲ್ಲಿ ರಾಷ್ಟ್ರೀಯ ಹೋರಾಟದ ಹಾಗೂ ಕನ್ನಡ ನಾಡಿನ ಸಾಂಸ್ಕೃತಿಕ ಸಂಕೇತಗಳನ್ನೊಳಗೊಂಡ ವಿಚಾರಧಾರೆ ಅಡಗಿದೆ.

> "ನಮ್ಮದೀ ಭರತಭೂಮಿ
>
> ಹೆರವರು ನಂಬದೆಲೆ ಜಗದೀಶ್ವರ ತಾನೆ"

ಎನ್ನುವ ರಾಷ್ಟ್ರೀಯ ಚಿಂತನೆಯ ಜೊತೆಗೆ ಐದು ಕನ್ನಡಿಗಳ ಸಮಗ್ರ ಕರ್ನಾಟಕವನ್ನು ಕಟ್ಟಿಕೊಡುತ್ತಾರೆ.

ಕನ್ನಡಿಗರ ಜಾಗೃತಿಗೆ ಭುವನೇಶ್ವರಿಯ ಧಾರ್ಮಿಕ ಸಂಕೇತವನ್ನು ಮೊದಲಿಗೆ ಬಳಸುವ ಶಾಂತ ಕವಿಗಳು ಅವಳ ಬಗ್ಗೆ ಅಭಿಮಾನ ತಳೆಯಲು ಹರಿಹರನ ಮೂಲಕ ಕರೆ ಕೊಡಿಸುತ್ತಾರೆ. "ಭಾಷೆಯ ಸಹಾಯವಿಲ್ಲದಿದ್ದರೆ ಮನುಷ್ಯ ಜಗತ್ತನ್ನು ಅರಿಯಲಾರ ಎಂಬ ನಿರ್ಣಯಕ್ಕೆ ಅವರು ಬಂದು ಮುಟ್ಟಿದರು". [೧]

ಮುಂಬೈ ಕರ್ನಾಟಕದ ಕನ್ನಡಿಗರ ಜರೂರತ್ತಿನ ಕುರುಹಾಗಿ ರಚನೆಯಾದ ಕರ್ನಾಟಕ ವಿದ್ಯಾವರ್ಧಕ ಸಂಘವು ಕನ್ನಡ ತನದ ಪ್ರಜ್ಞೆ ಮೂಡಿಸಲು ವಾಗ್ಭೂಷಣ ಪತ್ರಿಕೆಯನ್ನು ಹೊರಡಿಸಿದ್ದು ಮುಖ್ಯವಾದ ಸಂಗತಿ.

ಮೈಸೂರು ಪ್ರಾಂತ್ಯದಲ್ಲಿದ್ದ ರಾಜಪ್ರಭುತ್ವ ಕಾರಣವಾಗಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗಳಿಗೆ ಹೆಚ್ಚಿನ ಧಕ್ಕೆ ಉಂಟಾಗಿರಲಿಲ್ಲ. ಹಾಗಾಗಿ ಪರಭಾಷೆಗಳ ಒತ್ತಡ, ಕನ್ನಡ ಪ್ರಜ್ಞೆಯ ತುಡಿತಗಳನ್ನು ಅಭಿವ್ಯಕ್ತಿಸುವ ಪ್ರಸಂಗಗಳು ಒದಗಿ ಬಂದಿರಲಿಲ್ಲ. ಹಳೆಯ ಮೈಸೂರಿನ ರಾಜಕಾರಣಿಗಳಲ್ಲಿ ಇದ್ದ ಏಕೀಕರಣದ ಬಗೆಗಿನ ಅಸಡ್ಡೆ ಸಮಗ್ರ ದೃಷ್ಟಿಕೋನವನ್ನು ಹೊಂದಿದ್ದ ಸಾಹಿತಿಗಳಲ್ಲಿ ಇರಲಿಲ್ಲ.

ಬಿ.ಎಂ. ಶ್ರೀ ಯವರ ನಾಡು-ನುಡಿ, ಸಾಮ್ರಾಜ್ಯ ಶಾಹಿ, ಸ್ವಾತಂತ್ರ್ಯ, ಏಕೀಕರಣ, ರಾಜಶಾಹಿ, ಮೈಸೂರು, ಮಹಾರಾಜರ ಮೇಲಿನ ಅಕ್ಕರೆ, ಬ್ರಿಟಿಷರ ಧೋರಣೆ, ಪಾಶ್ಚಾತ್ಯ ವಿಚಾರಧಾರೆಯ ಪ್ರಭಾವ ಮೊದಲಾದವು ಇಡೀ ಕನ್ನಡ ಸಾಹಿತ್ಯ ಚಿಂತನೆಯಲ್ಲಿಯೇ ಭಿನ್ನವಾದ ನೆಲೆಗಳನ್ನು ಹಿಡಿಯುತ್ತವೆ ಎನ್ನಬಹುದು.

ಕನ್ನಡ ಭಾಷೆಯ ಸಾಹಿತ್ಯದ ಸ್ಥಿತಿ ಗತಿಗಳ ಬಗ್ಗೆ ವಿಮರ್ಶಾತ್ಮಕ ನೋಟ ಬೆಳೆಸಿಕೊಂಡಿದ್ದ ಶ್ರೀಯವರು ಇಂಗ್ಲಿಷ್ ಗೀತೆಗಳು ಸಂಕಲನದ ಮೂಲಕ ಹೊಸಗನ್ನಡ ಕಾವ್ಯಕ್ಕೆ ಹೊಸ ತಿರುವಿತ್ತರು.

ಶ್ರೀಯವರ ಕಾವ್ಯಾಭಿವ್ಯಕ್ತಿಯಲ್ಲಿ ಒಂದು ಕಡೆ ಕನ್ನಡ ಬಾವುಟ, ಕನ್ನಡ ರತ್ನ ಸಿಂಹಾಸನ, ಕನ್ನಡ ತಾಯಿ, ಹೆಣ್ಣು ಮೊದಲಾದವಿದ್ದರೆ ಇನ್ನೊಂದು ಕಡೆ ಬ್ರಿಟನ್ನಿನ ರಾಣಿ ವಿಕ್ಟೋರಿಯಾ, ಬ್ರಿಟಿಷ್ ಸಾಮ್ರಾಜ್ಯ ಶಾಹಿ, ಅವರ ಗುಲಾಮರಾಗಿದ್ದ ಮೈಸೂರಿನ ರಾಜಶಾಹಿ ಮೊದಲಾದವು ಕಾಣಿಸಿಕೊಳ್ಳುತ್ತವೆ. ಇಂತಹ ದ್ವಂದ್ವಗಳ ನಡುವೆಯೂ ಅವರ ಚಿಂತನೆಗಳು ಕನ್ನಡ ಭಾಷೆ, ಸಾಹಿತ್ಯ, ಪರಿಷತ್ತು, ಕನ್ನಡಿಗರ ಹಿತ ಚಿಂತನೆಗಳ ಪರಿಧಿಗಳಲ್ಲಿಯೇ ಇದ್ದವು.

ಗಾಂಧೀಜಿ ಕೇಂದ್ರಿತ ಚಿಂತನೆಗಳ ಮೇಲೆ ಒಂದು ಕಡೆ ಸಾವರ್ಕರ್ ಕೇಂದ್ರಿತ ಉಗ್ರವಾದಿ ಚಿಂತನೆಯ ಆಯಾಮಗಳೆರಡನ್ನು ಕನ್ನಡ ನವೋದಯ ಚಿಂತನಾ ಕ್ರಮದಲ್ಲಿ ಕಾಣಬಹುದಾಗಿದೆ.

ಸಾಂಸ್ಕೃತಿಕ ಧಾರೆಗಳ ಮೂಲಕ ವಸಾಹತು ಶಾಹಿಯನ್ನು ಎದುರಿಸುವುದು, ಭೂ ಮತ್ತು ಭಾಷಿಕ ಸಮಸ್ಯೆಗಳ ದರ್ಶನ, ಭಾಷೆ ಕಾವ್ಯ ಪರಂಪರೆಯ ಚಾರಿತ್ರಿಕ ಆಳ್ವಿಕೆಗಳ ವೈಭವೀಕರಣ, ಸಾಂಸ್ಕೃತಿಕ ಕೇಂದ್ರಗಳ ಮೂಲಕ ಆಕರ್ಷಣೆ, ಅರಿವು, ಸಮನ್ವಯ, ಸಮರಸಗಳ ಪ್ರತಿಪಾದನೆ ನಾಡಿಗಾಗಿ ಕ್ಷಾತ್ರತ್ವವನ್ನು ಉದ್ದೀಪಿಸುವ ರಚನೆಗಳು ಈ ಎಲ್ಲವೂ ನವೋದಯ ಕಾವ್ಯಕ್ಕೆ ತಾತ್ತ್ವಿಕ ನೆಲೆಗಟ್ಟನ್ನು ರೂಪಿಸಿವೆ.

---

[6] ಕನ್ನಡ ಸಾಹಿತ್ಯ ಸಂಗಾತಿ, ಕುರ್ತಕೋಟಿ ಕೀ.ರಂ..

## ಅಧ್ಯಾಯ ೩

## ಕುವೆಂಪು – ವೈಯುಕ್ತಿಕ ಹಿನ್ನೆಲೆ

'ಕನ್ನಡ ನವೋದಯ ಕಾವ್ಯ'ಕ್ಕೆ ವಿಶ್ವಮಾನ್ಯತೆಯನ್ನು ತಂದುಕೊಟ್ಟ ಪ್ರಮುಖಾಗ್ರರಾದ ಕುವೆಂಪು ಕಾವ್ಯ ಸೃಜನೆಯನ್ನು ನಿರಂತರ ತಪಸ್ಸಿನ ಹಾಗೆ ಮುಂದುವರೆಸಿಕೊಂಡು, ವಾಙ್ಮಯ ಸಂಸರ್ಗದಲ್ಲೇ ತಮ್ಮ ಚೈತನ್ಯಶೀಲ ಚಿತ್ತವನ್ನು ತೊಡಗಿಸಿಕೊಂಡವರು. ಕನ್ನಡ ಭಾಷೆಯ ಸಾಧ್ಯತೆಗಳನ್ನು ಸಂಪೂರ್ಣ ದುಡಿಸಿಕೊಂಡವರು.

ವೈದಿಕ ಸಂಸ್ಕೃತಿಯ ಉನ್ನತ ಸ್ತರಗಳು ತಮಗಿದ್ದ ಸವಲತ್ತುಗಳನ್ನು ಯಾವುದೇ ಕಾರಣಕ್ಕೂ ಬಿಟ್ಟು ಕೊಡಲು ಸಿದ್ಧವಿರದಿದ್ದ ಸನ್ನಿವೇಶದಲ್ಲಿ ಆಧುನಿಕ ಕನ್ನಡದ ಮೊದಲ ಅ-ಬ್ರಾಹ್ಮಣನಾದ ಕುವೆಂಪುರವರ ಬರವಣಿಗೆಯೇ ಪ್ರತಿಭಟನೆ. ಅದೇ ಸಂಪ್ರದಾಯ ಮತ್ತು ಪರಂಪರೆಯ ವಿರುದ್ಧ ಮೊದಲ ಕ್ರಾಂತಿ ಕಹಳೆ.

ಶೂದ್ರ ಸಮುದಾಯದಲ್ಲಿ ಹುಟ್ಟಿದ ಕುವೆಂಪುರವರು ತನಗೆ ಓದು ಬರಹದ ಅಭೀಪ್ಸೆಗಳನ್ನು ಮೂಡಿಸಲು ಸಮರ್ಥವಾದ ಕ್ರೈಸ್ತ ಮಿಶಿನರಿಗಳಿಂದ ಪ್ರಭಾವಿತರಾಗುತ್ತಾರೆ. ಗ್ರಾಮೀಣ ಕೃಷಿ ಅವಲಂಬಿತ ಅವಿಭಕ್ತ ಕುಟುಂಬವೊಂದರಲ್ಲಿ ಹುಟ್ಟಿ ಬೆಳೆದ ಕುವೆಂಪುವಿಗೆ ಅಂತಹ ಕೌಟುಂಬಿಕ ವ್ಯವಸ್ಥೆಯಿಂದ ಪ್ರಯೋಜನ, ಪರಿಮಿತಿಗಳೆರಡೂ ಲಭಿಸಿದವು.

ಇಂತಹ ವ್ಯವಸ್ಥೆಯಲ್ಲಿ ವೈಯುಕ್ತಿಕತೆಗೆ ಮಹತ್ವವಿಲ್ಲ, ಪ್ರತಿಯೊಬ್ಬನೂ ಸಮುದಾಯದ ಹಿತಾಸಕ್ತಿಗಳಿಗೆ ಪೂರಕವಾಗಿಯೇ ಬೆಳೆಯಬೇಕಾಗುತ್ತದೆ. ಶೂದ್ರಾತಿಶೂದ್ರರಿಗೆ ಮೀಸಲಾದ ಸಾಹಿತ್ಯದ ಮೂಲ ದ್ರವ್ಯವಾದ ವೈವಿಧ್ಯಮಯವಾದ ಅನುಭವ ಕುವೆಂಪುವಿಗೆ ದೊರೆಯಿತು. ಅವರ ಬಾಲ್ಯ ಜೀವನವು ಅನನ್ಯವಾದ ವೈವಿಧ್ಯ, ವಿನೋದ, ತುಂಟತನ ಹಾಗೂ ಸ್ನೇಹಮಯತೆಗಳಿಂದ ಮಲೆನಾಡಿನ ಬದುಕಿನ ನಾನಾ ಸಂವೇದನೆಗಳನ್ನು ಪಡೆದುಕೊಂಡಿತ್ತು. ಕುವೆಂಪು ಯುವಕರಾಗುತ್ತ ಹೋದಂತೆ ತಾವು ಹುಟ್ಟಿ, ಬೆಳೆದ ಪರಿಸರದ ಜೀವನ ವಿಧಾನ ಮತ್ತು ತಾವು ಆದರ್ಶೀಕರಿಸಿಕೊಂಡ ಜೀವನ ವಿಧಾನದ ನಡುವಿನ ಅಂತರದಲ್ಲಿ ನಿರಂತರ ಸಂಘರ್ಷವನ್ನು ಅನುಭವಿಸುತ್ತಾರೆ. ಇದೇ ಸಂದರ್ಭದಲ್ಲಿ "ಬ್ರಾಹ್ಮಣ ಸಂಸ್ಕೃತಿಯಿಂದ ರೂಪಿತವಾದ ಮೌಲ್ಯಗಳನ್ನು ಆಚರಣೆ ತರಲಿಚ್ಛಿಸುವ, ಆದರೆ ಬ್ರಾಹ್ಮಣ ಆಚರಣೆಗಳನ್ನು ದ್ವೇಷಿಸುವ ಈ ಯುವಕನ ತಾಕಲಾಟಗಳು ಸಾಂಸ್ಕೃತಿಕವಾಗಿ ಅತ್ಯಂತ ಮಹತ್ವ ಪೂರ್ಣವಾಗುತ್ತದೆ"[೧].

ಕುವೆಂಪು ತಮ್ಮ ವ್ಯಕ್ತಿತ್ವದ ಆದರ್ಶವಾದಿ ದ್ರವ್ಯಗಳನ್ನು ಸಂಪೂರ್ಣವಾಗಿ ಕಾವ್ಯ ರಚನೆಯ ನೆಲೆಗಳಿಗೂ, ವಾಸ್ತವದ ಎಳೆ ಎಳೆಯನ್ನೂ ವಿವರವಾಗಿ ಬಲ್ಲ ಬಹಿರ್ಮುಖಿ ಅಂಶಗಳನ್ನು ಕಥಾ

ಸಾಹಿತ್ಯದ ರಚನೆಗೂ ಮೀಸಲಿಡುತ್ತಾರೆ. ವಾಸ್ತವದಿಂದ ಆದರ್ಶದ ಕಡೆಗೆ ಬುದ್ಧಿ ಪೂರ್ವಕವಾಗಿ ಮಾಡುವ ಪ್ರಯಾಣವೇ ಪೂರ್ಣ ವ್ಯಕ್ತಿತ್ವವನ್ನು ಸಾಧಿಸಿಕೊಳ್ಳುವ ಧಾರೆಯೆಂಬ ಖಚಿತವಾದ ನಂಬಿಕೆಯನ್ನು ಅವರ ಹಲವು ಸಾಹಿತ್ಯ ಕೃತಿಗಳಲ್ಲಿ ಗಮನಿಸಬಹುದು.

ಕುವೆಂಪು ಅವರ ಅಧ್ಯಯನ ಕ್ರಮ ಮತ್ತು ಅಧ್ಯಯನ ವಸ್ತುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅವರ ಅನಿವಾರ್ಯ ಸ್ವಾವಲಂಬನೆ ಹಾಗೂ ಸಮರ್ಥ ಮಾರ್ಗದರ್ಶನದ ಕೊರತೆ ಅವರ ಕಾವ್ಯದಲ್ಲಿ ಕಂಡು ಬರುವ ಪ್ರವಾದಿತನಕ್ಕೆ ಕಾರಣವೆನಿಸುತ್ತದೆ. ಅವರು ತಾವು ಕಂಡುಕೊಂಡ ಸತ್ಯಗಳನ್ನು ಇತರರಿಗೆ ಹೇಳಲೆಂದು ಬರವಣಿಗೆಯನ್ನು, ಕವಿತೆಯನ್ನು ಬಳಸಿದರೆ ವಿನಾ, ಕವಿತೆಯ ಮೂಲಕವೇ ಸತ್ಯಗಳನ್ನು ಕಾಣಲೆಂದಲ್ಲ.

ತಮ್ಮ ಕಾದಂಬರಿಗಳು ಜೀವನದ ದಟ್ಟ ವಿವರಗಳಲ್ಲಿ ಸೊಕ್ಕುವ ಮಟ್ಟಿಗೆ ವಾಸ್ತವೀಕೃತಗೊಳ್ಳುವ ಅವರ ಕಥಾ ಸಾಹಿತ್ಯದ ಬರವಣಿಗೆ, ಕಾವ್ಯದಲ್ಲಿ ತತ್ವ ಮತ್ತು ಆಧ್ಯಾತ್ಮದಂತ ಅಮೂರ್ತ ವಿಚಾರಗಳನ್ನು ಅಭಿವ್ಯಕ್ತಿಸುತ್ತದೆ.

ತನ್ನ ಮಲೆನಾಡಿನ ಬದುಕನ್ನು ಅದರ ಭಾಷಾ ಹಿನ್ನೆಲೆಯಲ್ಲಿಯೇ ಕಾವ್ಯ ಸ್ಪರ್ಶಕ್ಕೆಳೆಸುವ ಪ್ರಕ್ರಿಯೆಯ ವ್ಯರ್ಥತೆಯನ್ನು ಕೈ ಬಿಟ್ಟು ಶಿಷ್ಟ ಭಾಷೆಯನ್ನೇ ಮಾಧ್ಯಮವಾಗಿಟ್ಟುಕೊಳ್ಳುತ್ತಾರೆ. ಕುವೆಂಪು ಜೀವನ ವಿಧಾನದ ಒಂದು ಪ್ರಮುಖ ಲಕ್ಷಣವೆಂದರೆ ಅಪರಿಚಿತವಾದ ನೂತನ ಜೀವನ ವಲಯಗಳೊಂದಿಗೆ ಸಂಪರ್ಕ ಬೆಳೆಸುವುದರಲ್ಲಿ ಅವರು ಆಸಕ್ತಿ ತೋರಿಸುವುದಿಲ್ಲ.

ಕುವೆಂಪು ಕಾವ್ಯದಲ್ಲಿ ತೀವ್ರವಾದ ವಿಷಾದ ಕಾಣಬರದು. ವೈಯುಕ್ತಿಕ ಅಳಲನ್ನು ಕಾವ್ಯವಾಗಿಸುವ ಬದಲು, ಕಾವ್ಯ ರಚನೆಯು ಅಂತಹ ನೋವಿನಿಂದ ಬಿಡುಗಡೆ ಪಡೆಯುವ ಹಾದಿಯಾಗಿ ಅವರಿಗೆ ಕಂಡಿರಬಹುದು.

---

೧. ಹಾಡೇ ಹಾದಿಯ ತೋರಿತು, ಪುಟ ೭೬

## ಕುವೆಂಪು ಮತ್ತು ನವೋದಯ ಕಾವ್ಯ

**ಕುವೆಂಪು ಪ್ರಕೃತಿ ಕುರಿತ ಧೋರಣೆಗಳು:**

ಮನುಷ್ಯ ಸಹಜವಾದ ವಿಷಾದ ಹಾಗೂ ಏಕಾಕಿತನಗಳಿಂದ ಮುಕ್ತವಾಗಲು ಮೊದಲ ಹಂತದಲ್ಲಿ ಕುವೆಂಪು ಅವರಿಗೆ ಪ್ರಕೃತಿಯ ಆಸ್ವಾದನೆ ಹಾಗೂ ವರ್ಣನೆಗಳು ಅವಕಾಶ ಒದಗಿಸಿದವು. ಪ್ರಕೃತಿಯೇ ದೇವರು ಎಂಬ ಆರಾಧನಾ ಭಾವವನ್ನು ತೋರಿಸದ ಕುವೆಂಪು ಪ್ರಕೃತಿ ಸೌಂದರ್ಯಾನುಭಾವ ಮತ್ತು ಅದನ್ನು ಕುರಿತ ಚಿಂತನೆಗಳನ್ನು ಪರಸ್ಪರ ಸಂಯೋಗಿಸುತ್ತಾರೆ. ಅವರ ಕವಿತೆಯು ಇಂದ್ರಿಯಾನುಭಾವ ಹಂತದಿಂದ ತಾತ್ವಿಕ ನೆಲೆಯವರೆಗೆ ಹಲವು ಹಂತಗಳನ್ನು ಪಡೆದುಕೊಂಡಿದೆ. "ಮನುಷ್ಯ ಜೀವನ ಹಾಗೂ ಪ್ರಕೃತಿ ಜಗತ್ತುಗಳ ನಡುವೆ ಇರಬಹುದಾದ ಅರ್ಥಪೂರ್ಣ ಸಂಬಂಧಗಳನ್ನು ಸಂವಾದಗಳನ್ನು ಹುಡುಕುವ ಕೆಲಸದಲ್ಲಿ ಕುವೆಂಪು ಅವರ ಕವಿತೆಯು ಉತ್ಸಾಹ ತೋರುವುದಿಲ್ಲ"[೨].

**ಮಾನವ ಜಗತ್ತು:** ಕುವೆಂಪು ಕವಿತೆಯನ್ನು ತಮ್ಮ "ಸ್ವಾಭಿವ್ಯಕ್ತಿಯ ಮಾಧ್ಯಮವಾಗಿ ಸ್ವೀಕರಿಸುವುದರಿಂದ ಅವರ ಕಾವ್ಯ ಸೃಷ್ಟಿಯಲ್ಲಿ ಮನುಷ್ಯ ಸಂಬಂಧಗಳಿಗೆ ಪ್ರಧಾನ ನೆಲೆ ದೊರಕಿಲ್ಲ ಅಲ್ಲದೆ ಅವರು ಪಾತ್ರಗಳ ಪ್ರತಿಮಾತ್ಮಕತೆಗೆ ಹೆಚ್ಚಿನ ಮಹತ್ವ ನೀಡಿ ಪ್ರತಿಕೃತಿ ವಿಧಾನವನ್ನು ಕಡೆಗಣಿಸುವುದರಿಂದ ಪಾತ್ರವೊಂದರ ಕೆಲವು ಆಯಾಮಗಳು ಮುಖ್ಯವೆನಿಸಿ ಉಳಿದವೆಲ್ಲ ಹಿಂದೆ ಸರಿದು ಸಮಗ್ರತೆ ಸಂಕೀರ್ಣತೆಗಳು ಕಾಣದಾಗುತ್ತವೆ ಮತ್ತು ವೈಯುಕ್ತಿಕ ವಿಷಾದವನ್ನು ಆದರ್ಶ ಪ್ರಿಯತೆ ನಿಸರ್ಗ ಪ್ರಿಯತೆ ಅಥವಾ ಆಧ್ಯಾತ್ಮಿಕತೆಯಂತಹ ಮೌಲ್ಯಗಳ ಹಿನ್ನೆಲೆಯಲ್ಲಿ ಮರೆಮಾಚಿಕೊಂಡು ಕಾವ್ಯ ಬರೆಯುವ ಕುವೆಂಪು ಅವರ ಪ್ರವೃತ್ತಿ ಅವರ ಅಂತರಂಗದ ತಾಕಲಾಟಗಳನ್ನು ಉನ್ನತೀಕರಿಸಿ ಪಾಂಡಿತ್ಯಪೂರ್ಣವಾದ ಶೈಲಿಯಲ್ಲಿ ಅಭಿನಯಿಸುವ ಕವಿತೆಗಳಿಗೆ ದಾರಿ ಮಾಡಿಕೊಟ್ಟಿದೆ"[೩].

ಕುವೆಂಪು ಕಾಮ, ಪ್ರೇಮ, ಸ್ನೇಹ-ದ್ವೇಷ ಮುಂತಾದ ಭಾವನೆಗಳ ಶೋಧನೆಗೆ ಒಳಗಾಗುವುದಿಲ್ಲ. ಬದಲಾಗಿ ಅವುಗಳನ್ನು ಕುರಿತಾದ ತಮ್ಮ ಚಿಂತನೆಯ ಫಲಿತಾಂಶಗಳನ್ನು ಮಾತ್ರ ಕವಿತೆಯೊಳಗೆ ಮಂಡಿಸುತ್ತಾರೆ ಹಾಗೂ ಮನುಷ್ಯ ಸಂಬಂಧಗಳ ಬಗ್ಗೆ ಪ್ರೇಕ್ಷಕರ ಹಾಗೆ ಬರೆಯುತ್ತಾರೆ.

**ಸಮಾಜ:** ಕುವೆಂಪು ವರ್ಣಾಧಾರಿತ ಶೋಷಣೆಗೆ ಕೊಟ್ಟಷ್ಟು ಮಹತ್ವವನ್ನು ವರ್ಗಾಧಾರಿತ ಶೋಷಣೆಗೆ ನೀಡುವುದಿಲ್ಲ. ಈ ಪರಿಸ್ಥಿತಿಯು ಬೇಂದ್ರೆಯವರಲ್ಲಿ ತಿರುವು ಮುರುವಾಗುತ್ತದೆ. ಕುವೆಂಪು ಯಾವುದೇ ರಾಜಕೀಯ, ಸಾಮಾಜಿಕ ಸಿದ್ಧಾಂತಗಳಿಗೆ ಒಡ್ಡಿಕೊಳ್ಳದೆ ತಮ್ಮ ಕವಿತೆಯ

ಉದ್ದಕ್ಕೂ ಸಾಮಾಜಿಕ ಪ್ರಜ್ಞೆಯನ್ನು ಪ್ರಕಟಿಸಿದ್ದಾರೆ ಹಾಗೂ ತಮ್ಮ ಧಾರ್ಮಿಕ ಹಾಗೂ ಆಧ್ಯಾತ್ಮಿಕ ಆಸಕ್ತಿಗಳಿಂದ ಸಾಮಾಜಿಕ ಪ್ರಭೆಯ ಪ್ರಖರತೆ ಕಡಿಮೆಯಾಗದಂತೆ ಎಚ್ಚರವಹಿಸಿದ್ದಾರೆ.

ತಮ್ಮ ಸಾಮಾಜಿಕ ಹಿನ್ನೆಲೆಯ ಫಲವಾಗಿ ಅವರು ರೈತನ ಬವಣೆಗಳು ಹಾಗೂ ಗ್ರಾಮೀಣ ಸಂಸ್ಕೃತಿಗೆ ಆಗಿರುವ ಅನ್ಯಾಯಗಳ ಬಗ್ಗೆ ಉಳಿದಿಬ್ಬರು ಕವಿಗಳಿಗಿಂತ ಹೆಚ್ಚು ಪ್ರಗತಿಪರವಾದ, ಸುಧಾರಣೆಗಿಂತ ಆಮೂಲಾಗ್ರ ಪರಿವರ್ತನೆಯನ್ನು ಪ್ರತಿಪಾದಿಸುವ ಕವಿತೆಗಳನ್ನು ರಚಿಸುವುದು ಸಾಧ್ಯವಾಯಿತು. ಕುವೆಂಪುರವರ ಸಾಮಾಜಿಕ ಕವನಗಳು ಹೆಚ್ಚು ಸಂವಹನ ಶೀಲವೂ ಅಸಂಕೀರ್ಣವೂ ಆಗಿವೆ. ಭಾವೋದ್ಧೀಪನೆ ಮಾಡುವ ತನ್ನ ಉದ್ದೇಶದಲ್ಲಿ ಯಶಸ್ವಿಯಾದರೂ ಗಾಢವಾದ ಆಲೋಚನೆಯನ್ನು ಪ್ರಚೋದಿಸುವುದಿಲ್ಲ.

**ಧರ್ಮ:** ಕುವೆಂಪು ಅವರ ಬದುಕು ಹಾಗೂ ಕವಿತೆಯಲ್ಲಿ ಖಚಿತವಾದ ಆಧ್ಯಾತ್ಮಿಕತೆಯ ಎಳೆಯಿದೆ. ಆದರೆ ಅವರ ಬದುಕಿನ ಆಧ್ಯಾತ್ಮಿಕ ಸಾಧನೆಯಲ್ಲಿ ಇದ್ದಿರಬಹುದಾದ ಅನುಭಾವದ ನೆಲೆಗಳು ಅವರ ಕಾವ್ಯದಲ್ಲಿ ಮೂಡಿ ಬಂದಿಲ್ಲ.

ಕುವೆಂಪು ಕಾವ್ಯದ ವಿಶಿಷ್ಟ ಸ್ವರೂಪ ಮತ್ತು ಸಮತೋಲನಗಳಲ್ಲಿ ರಾಮಕೃಷ್ಣ, ವಿವೇಕಾನಂದ, ರವೀಂದ್ರ ಹಾಗೂ ಅರವಿಂದರ ವಿಚಾರ ಹಾಗೂ ಸಾಹಿತ್ಯ ಸೃಷ್ಟಿಗಳ ಪ್ರಭಾವವಿದೆ. ಸಾಂಸ್ಥಿಕವಾದ ಧರ್ಮವನ್ನು ಅದರ ಎಲ್ಲಾ ನೆಲೆಗಳಲ್ಲೂ ನಿರಾಕರಿಸುತ್ತಾರೆ.

---

೨. ಅದೇ ೨೩೫ ...

೩. ಅದೇ ೨೪೯....

# ಬೇಂದ್ರೆ, ವೈಯುಕ್ತಿಕ ಜೀವನ

ಚಿತ್ಪಾವನ ಕೊಂಕಣಸ್ಥ ಮನೆತನಕ್ಕೆ ಸೇರಿದ ಬೇಂದ್ರೆ ಒಬ್ಬ ವೇದವಿತ್ ಕವಿ. ಸಾಹಿತ್ಯವು ಆಧ್ಯಾತ್ಮಿಕ ದೀಕ್ಷೆ ಪಡೆದದ್ದಾಗಿರಬೇಕು ಎಂಬ ನಿಲುವಿನ ಬೇಂದ್ರೆಗೆ ಅರವಿಂದರ ವಿಚಾರ ವಲಯದ ಪ್ರಭಾವವಿದೆ. ತಮ್ಮ ಹೃದಯಸ್ಥ ಕೋಗಿಲೆಯು ಅಂಬಿಕೆ(ತಾಯಿ) ಎಂಬ ನಂಬಿಕೆಯಿಂದ 'ಅಂಬಿಕಾತನಯದತ್ತ'ರಾಗುವ ಬೇಂದ್ರೆಗೆ ಅದು ಕವಿ ಸಂಕೇತವಾದರೆ, ಔದುಂಬರ ಕಾವ್ಯ ಸಂಕೇತವಾಗುತ್ತದೆ. ಗಣಪತಿಯಿಂದ ದೌತಿ, ಲಕ್ಕಣಿಗೆ ಪಡೆದು ಹೊಸ ಮಹಾ ಕಾವ್ಯ ಬರೆಯುವ ಹೊಣೆ ಹೊರುತ್ತಾರೆ. ಶುದ್ಧ ಭಾವ ಜಾಗೃತಿ, ಶುದ್ಧ ಬುದ್ಧಿ ಜಾಗೃತಿ, ಶುದ್ಧ ವಿವೇಕ ಜಾಗೃತಿ, ಶುದ್ಧ ಹೃದಯ ಜಾಗೃತಿ ಬೇಂದ್ರೆ ಮಹಾಕಾವ್ಯದ ಗುರಿ. ಬೇಂದ್ರೆಯವರ ಬಾಲ್ಯ ಮತ್ತು ವಿದ್ಯಾರ್ಥಿ ಜೀವನಗಳ ಬಗ್ಗೆ ದೊರೆಯುವ ಮಾಹಿತಿಗಳ ಬಾಹುಳ್ಯವೇ ಅವರ ಸಾಂಸ್ಕೃತಿಕ ಪರಿಸರದ ಶ್ರೀಮಂತಿಕೆಗೆ ಸಾಕ್ಷಿಯಾಗಿದೆ.

ಬೇಂದ್ರೆಯವರದು ಸ್ತ್ರೀ ಪೋಷಿತವಾದ ಬಾಲ್ಯ "ಬೇಂದ್ರೆಯವರ ವ್ಯಕ್ತಿತ್ವ ರೂಪುಗೊಳ್ಳುವುದಕ್ಕೆ ಅವರ ಮನೆತನ, ಸುತ್ತಮುತ್ತಲಿನ ಪರಿಸರ, ವಿಶ್ವ ವಿದ್ಯಾನಿಲಯದ ಶಿಕ್ಷಣ ಇವುಗಳ ಹೊಣೆ ನಾಲ್ಕರಲ್ಲೊಂದು ಪಾಲಾದರೆ ಉಳಿದ ಮೂರು ಪಾಲಿನ ಹೊಣೆ ತಾಯಿಯದು", "ತಾಯಿ, ಮಾಯಿ, ಅಂಬಿಕೆಯೇ ನಿನ್ನ ತನಯ ದತ್ತನು. ನೀನು ಇತ್ತುದಿತ್ತನು ಎಂದು ಅವರು ಕವಿತೆಯಲ್ಲಿ ನುಡಿದುದ್ದು ಉತ್ಪ್ರೇಕ್ಷೆಯಲ್ಲ" ಎಂದು ಕುರ್ತುಕೋಟಿಯವರು ಬೇಂದ್ರೆ ಕವಿತೆಯ ಮೂಲನೆಲೆಯನ್ನು ಗುರುತಿಸುತ್ತಾರೆ.

ಬೇಂದ್ರೆಯವರು ಈ ಬಗೆಯ ಬಾಲ್ಯ ಪರಿಸರದಲ್ಲಿ ಅನುಭವಿಸಿದ ಅಪರಿಮಿತವಾದ ಸ್ವಾತಂತ್ರ್ಯವು ಒಂದು ರೀತಿಯ ಅವ್ಯವಸ್ಥಿತವಾದ ಜೀವನ ಕ್ರಮ ಹಾಗೂ ಮನೋಧರ್ಮಗಳಿಗೆ ಅವಕಾಶ ಮಾಡಿಕೊಟ್ಟಿದ್ದರೆ ಅಚ್ಚರಿಯೇನು ಇಲ್ಲ.

ಬೇಂದ್ರೆಯವರದು ತಾವು ಬೆಳೆದ ಹುಬ್ಬಳ್ಳಿ–ಧಾರವಾಡ ಪರಿಸರದ ವಿಷಯಗಳನ್ನು ಗ್ರಹಿಸಿ ಅದರೊಂದಿಗೆ ಕಚ್ಚಾಡಿದರೂ ಅದರೊಂದಿಗೇ ಬೆರೆತು ಹೋದ ವ್ಯಕ್ತಿತ್ವ. "ಧಾರವಾಡದ ಬೆಳವಣಿಗೆಯ ಶೈಲಿಯೇ ಬೇಂದ್ರೆಯವರ ಕಾವ್ಯ ಶೈಲಿಯಾಗಿದೆ. ಜಾನಪದ ಮತ್ತು ನಾಗರ ಎರಡೂ ಅಂಶಗಳು ಬೆರೆತುಕೊಂಡಿರುವ ಸಂಸ್ಕೃತಿ ಧಾರವಾಡದ್ದು...." '

ಬೇಂದ್ರೆಯವರ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿ ಅವರ ಆಸ್ತಿಕತೆ, ಆಧ್ಯಾತ್ಮಿಕತೆ ಹಾಗೂ ಅನುಭಾವಪರತೆಗಳನ್ನು ಗುರುತಿಸಬೇಕಾಗುತ್ತದೆ. ಆಧ್ಯಾತ್ಮಿಕತೆಯು ಅವರ ಸಮಗ್ರ ಬದುಕಿನಲ್ಲೇ

ಓತಪ್ರೋತವಾಗಿ ಬೆರೆತು ಹೋಗಿದೆ. ಆಸ್ತಿಕತೆಯು ಅವರಿಗೆ ವೈಯುಕ್ತಿಕ ಸಮಸ್ಯೆಗಳಿಗೆಲ್ಲ ಪರಿಹಾರವಾಗಿ ಕಂಡಿದೆ. ಅವರೇ ಹೇಳುವಂತೆ 'ನನ್ನ ಮನೋಧರ್ಮವು ಪೌರುಷಕ್ಕಿಂತ ದೈವಾಲಂಬನವನ್ನೇ ಪ್ರಧಾನವಾಗಿ ಪರಿಗಣಿಸುತ್ತದೆ'.

ಸಖ್ಯವನ್ನು ಬದುಕಿನ ಅತ್ಯಂತ ಮಹತ್ವದ ಅಂಗವಾಗಿ ಪರಿಗಣಿಸಿದ್ದ ಬೇಂದ್ರೆ 'ಗೆಳೆಯರ ಗುಂಪಿ'ನ ಮೂಲಕ ಮಾಡಿದ ಸಾಧನೆಯೂ ಅವರ ಕಾವ್ಯಾಭಿವ್ಯಕ್ತಿಯ ಸತ್ವವಾಗಿಯೂ ಕೆಲಸ ಮಾಡಿದೆ. "ಬೇಂದ್ರೆಯವರ ಜೀವನ ಹಾಗೂ ಕಾವ್ಯಗಳು ಕಣ್ಣೀರಿನಲ್ಲಿ ಕೈತೊಳೆದವು. ಅದೂ ಕೂಡ ಸಾರ್ವತ್ರಿಕವಾದ ಸರ್ವಸಮಾನ ದುಃಖವಲ್ಲ, ಕೌಟುಂಬಿಕವಾದ, ಸ್ನೇಹ ತತ್ಪರವಾದ, ವೈಯುಕ್ತಿಕ ಸಂಬಂಧಗಳ ದುರಂತದಲ್ಲೇ ಬೇರು ಬಿಟ್ಟ ದುಃಖ",[೫] 'ನೋವೇ ನಿನ್ನ ಜೀವ ಇಂದಿನೀ ಭಾವ' ಎಂದು ಮಿಡಿಯುವ ಕವಿ ಹೃದಯ ಇಂತಹ ಅಭದ್ರತೆ, ಬಡತನ ಮತ್ತು ಸಾವು ನೋವುಗಳ ವಿಷ ವೃತ್ತದಲ್ಲಿ ಪರಿಭ್ರಮಿಸುತ್ತಿರುವಾಗಲೂ ಅತ್ಯುತ್ತಮ ಕಾವ್ಯ ರಚನೆಯನ್ನು ಆಗ ಮಾಡಿತು. ಈ ನಡುವೆಯೂ "ಜೀವನ ಮುಗ್ಧತೆ ಮತ್ತು ಜೀವನ ಸಂತೋಷಗಳ ವೈಭವೀಕರಣದಲ್ಲಿ ಬೇಂದ್ರೆಯವರಿಗೆ ಸರಿಸಾಟಿಯಾದ ಕವಿ ಕನ್ನಡದಲ್ಲಿ ಬೇರೊಬ್ಬರಿಲ್ಲ"[೬]. ಬೇಂದ್ರೆಯವರಿಗೆ ಕವಿತೆಯು ಪಲಾಯನದ ದಾರಿಯಾಗಿರಲಿಲ್ಲ ಅವರು ವ್ಯಕ್ತಿನಿಷ್ಟವಾಗಿ ಗ್ರಹಿಸುವ ಕಟ್ಟಿಕೊಡುವ, ವಿಷಾದದ ಸಾಚಾತನವನ್ನು ಅಲ್ಲಗಳೆಯಲಾಗುವುದಿಲ್ಲ.

ಕಾವ್ಯ ಹಾಗೂ ಜೀವನಗಳೆರಡರ ಉದ್ಧಾರವನ್ನು ಭಕ್ತಿ ಕಾವ್ಯದಲ್ಲಿಯೇ ಕಂಡ ಬೇಂದ್ರೆ ಹತ್ತೊಂಭತ್ತನೆ ಶತಮಾನದ ಉತ್ತರ ಕರ್ನಾಟಕದ ಅನುಭಾವಿ ಸಂತರಿಂದ ದಟ್ಟವಾಗಿ ಪ್ರಭಾವಿತರಾಗಿದ್ದರು.

ವ್ಯಕ್ತಿನಿಷ್ಟ ಮನೋಧರ್ಮ ಹಾಗೂ ಅಸ್ತವ್ಯಸ್ಥ ಅಧ್ಯಯನ ಕ್ರಮಗಳಿಂದಾಗಿ ಹತ್ತು ಹಲವು ಅಧ್ಯಯನ ಕ್ಷೇತ್ರಗಳು ಈ ಪರಿಶೀಲನೆಯ ಹೊರಗಾದವು ಉದಾಹರಣೆ ಗಾಂಧಿಯವರ ತಾತ್ವಿಕ ಆಯಾಮಗಳ ಬಗ್ಗೆ ಬೇಂದ್ರೆ ವಿಮುಖರಾಗುತ್ತಾರೆ. ಕಾವ್ಯದ ಹೊರಗಿನ ಅವರ ಆಲೋಚನೆಗಳು ಗೊಂದಲಮಯವೂ, ದ್ವಂದ್ವ ಸಹಿತವೂ ಆದರೆ ಪ್ರತಿಯೊಂದು ಕವಿತೆಗೂ ತನ್ನದೇ ಆದ ವಿಚಾರ ಸರಣಿಯ ಗಟ್ಟಿ ಬೆನ್ನೆಲುಬು ಇರುತ್ತದೆ ಎಂಬುದನ್ನು ಡಿ.ಆರ್. ಸಮರ್ಥವಾಗಿ ವಿವರಿಸುತ್ತಾರೆ.

---

೪. ಕುರ್ತುಕೋಟಿ ೧೯೮೨, ದ.ರಾ. ಬೇಂದ್ರೆ ೩೧

೫. ಹಾಡೇ ಹಾದಿಯ ತೋರಿತು. ಪುಟ ೯೬

೬. ಅದೇ

ಬೇಂದ್ರೆಯವರ ಕವಿತೆಯು ಲೋಕವಸ್ತುವಿನ ಪ್ರತಿಕೃತಿಯೂ ಅಲ್ಲ, ಪ್ರತಿಮೆಯೂ ಅಲ್ಲ; ಅದು ಪ್ರತಿಸೃಷ್ಟಿ.

**ಪ್ರಕೃತಿ:** ವಸ್ತು ಯಾವುದೇ ಇರಲಿ ಅದು ಪ್ರಕೃತಿ ಹಾಗೂ ದೈನಿಕದ ವಿವರಗಳ ಜೊತೆಯಲ್ಲಿಯೇ ಅವರ ಕವಿತೆಯಲ್ಲಿ ಸಂಭವಿಸುತ್ತದೆ. ತನ್ನನ್ನು ಪ್ರಕೃತಿಯ ಅಖಂಡ ಅಂಗವೆಂದು ಗ್ರಹಿಸಿ, ಅದರ ಸಾತತ್ಯದಲ್ಲಿಯೇ ತನ್ನ ಸಾತತ್ಯವಿರುವ ಅರಿವನ್ನು ಹೊಂದಿರುವ ಬೇಂದ್ರೆಯವರಲ್ಲಿಇದು ಮೂಲತಃ, ಸೌಂದರ್ಯಾರಾಧನೆಯಲ್ಲ, ಬದಲಾಗಿ ಪ್ರಕೃತಿಯನ್ನು ಜೀವನ ಸ್ರೋತದ ಉಗಮವೆಂದು ಆರಾಧಿಸುವ ಪ್ರವೃತ್ತಿಯಾಗುತ್ತದೆ. ಪೋಷಕತ್ವದ ನೆಲೆಯಿಂದ ಪ್ರಕೃತಿಗೆ ಪ್ರೀತಿ, ಕೃತಜ್ಞತೆಗಳ ಅರ್ಪಣೆಯು ಇವರ ಪ್ರಕೃತಿ ಕಾವ್ಯದ ಆಶಯವಾಗಿ ಕೆಲಸ ಮಾಡಿದ್ದು, ತಾಯಿತನದ ಶ್ರೇಷ್ಟತ್ವವನ್ನು ಭೂಮಿಯಲ್ಲಿ ಗುರುತಿಸುತ್ತಾರೆ. ಕ್ರಮೇಣ ಈ ಆರಾಧನಾ ಭಾವವು ಆಧ್ಯಾತ್ಮಿಕ ಆಯಾಮಗಳನ್ನು ಪಡೆದುಕೊಂಡು ಜಡ ಪ್ರಕೃತಿಯ ಐಂದ್ರಿಯಿಕ ವರ್ಣನೆಯಲ್ಲಿ ಬೇಂದ್ರೆ ನಿರಾಸಕ್ತರಾಗುತ್ತಾರೆ.

ಸಾಂದರ್ಯಾತ್ಮಕವಾದ ಪ್ರಕೃತಿಯಲ್ಲಿ ಆನಂದ ಒರತೆಗಳನ್ನು ಗುರುತಿಸುತ್ತಲೇ, ಮಾನುಷ ಕ್ರೌರ್ಯಗಳಲ್ಲಿ ನಲುಗಿದ ಪ್ರಕೃತಿಯ ವಿಷಾದ ಮೂಲಗಳನ್ನು ಇತಿಹಾಸ ವ್ಯಾಪಿಯಾಗಿ ಗುರುತಿಸುತ್ತಾರೆ. ಬೇಂದ್ರೆಯವರ ಪ್ರಕೃತಿ ಕಾವ್ಯವು ಮನುಷ್ಯ ಜೀವನದ ಆಗು ಹೋಗುಗಳೊಂದಿಗೆ ಅವಿನಾಭಾವ ಸಂಬಂಧವನ್ನು ಪಡೆದುಕೊಂಡು ಒಂದು ಇನ್ನೊಂದಕ್ಕೆ ಭಾಷ್ಯವಾಗುತ್ತದೆ.

**ಮನುಷ್ಯ ಸಂಬಂಧಗಳು:** ಜೀವನವೆಂದರೆ ಅಧ್ಯಯನ, ಅಧ್ಯಾಪನ, ಕೃತಿ ರಚನೆಗಳ ಶಾಂತ ಗಂಭೀರ ಜೀವನವಲ್ಲ. ಅದು ನೂರಕ್ಕೆ ನೂರರಷ್ಟು ರಕ್ತ ಮಾಂಸಗಳ ಪ್ರೇಮ, ಕಾಮಗಳ ತೀವ್ರ ಹಂಬಲ–ವಿಷಾದಗಳ ದೇಹಬದ್ಧ ಜೀವನ ಎಂಬ ನಿಲುವಿನ ಬೇಂದ್ರೆ, ಉತ್ಕಟವಾಗಿ ಅದರೆಲ್ಲಾ ನೋವುಗಳೊಂದಿಗೆ ಜೀವನವನ್ನು ಪ್ರೀತಿಸಿದವರು. “ಸ್ವಾನುಭಾವವೇ ಆಗಿರಲಿ, ಲೋಕಾನುಭಾವವೇ ಆಗಿರಲಿ ಬೇಂದ್ರೆಯವರ ಕಾವ್ಯದ ಉದ್ದೇಶ ಆ ಅನುಭವವನ್ನು ಸಂಕೇತವಾಗಿರಿಸಿ ಅದರ ಮೂಲಕ ಜೀವನದ ಆಳವಾದ ತಿಳುವಳಿಕೆಯನ್ನು ಪಡೆಯುವುದಾಗಿದೆ. ಯಾವುದೇ ಅನುಭವ ತನ್ನ ವಿಶೇಷ ಮತ್ತು ಸಾಮಾನ್ಯವಾದ ಗುಣಧರ್ಮಗಳಿಂದ ಜೀವನ ರಹಸ್ಯವನ್ನು ಪ್ರಕಟಿಸುವಷ್ಟು ಪ್ರಾತಿನಿಧಿಕವಾದರೆ ಅದು ಬೇಂದ್ರೆಯವರ ಕಾವ್ಯದ ವಸ್ತುವಾಗಬಲ್ಲುದು”[೭].

ವೈಯುಕ್ತಿಕ ಅನುಭವದ ಸಾಮಾಜೀಕರಣ ಕ್ರಿಯೆಯು ಬೇಂದ್ರೆಯವರಲ್ಲಿ ಸಾಧ್ಯವಾಗುತ್ತದೆ.

ಇಲ್ಲದಿದ್ದರೆ ಅದು ಅಗಮ್ಯವಾಗಿ ಉಳಿಯುತ್ತದೆ. ಅನಿಯಂತ್ರಿತ ಕಾಮದ ಶಕ್ತಿ ಹಾಗೂ ನೈತಿಕ ಮೌಲ್ಯಗಳ ನಡುವಿನ ಸಂಘರ್ಷವನ್ನು ಬೇಂದ್ರೆ ಗುರುತಿಸಿದ್ದಾರೆ.

ದಾಂಪತ್ಯದ ಚೌಕಟ್ಟಿನಲ್ಲಿ ಕಾಮವು ತನ್ನ ವಿಕಾಸದ ಹಂತದಲ್ಲಿ ಪ್ರೇಮವಾಗುವ ಪ್ರಕ್ರಿಯೆಯನ್ನು ಗುರುತಿಸುತ್ತಾರೆ. ಅದು ಸೃಜನಶೀಲ ಆಯಾಮವನ್ನು ಪಡೆದುಕೊಳ್ಳುತ್ತದೆ. ಗಂಡು–ಹೆಣ್ಣುಗಳ ಸಂಬಂಧವನ್ನು ಸಮಾನತೆಯ ನೆಲೆಯಲ್ಲಿ ಅರ್ಥೈಸುತ್ತಾರೆ. ಜೊತೆಗೆ ಹೆಣ್ಣಿನ ದೃಷ್ಟಿಕೋನದಿಂದ ಕಾಮ–ಪ್ರೇಮಗಳನ್ನು ಅರ್ಥೈಸುವ ಪ್ರಯತ್ನವಿದೆ. ಕಾಮವನ್ನು ಪ್ರತ್ಯೇಕ ಘಟಕವೆಂದು ಪರಿಗಣಿಸದೆ ಜೀವನದ ಕುಲುಮೆಗಿಟ್ಟು ಶೋಧಿಸುತ್ತಾರೆ. ಅಂದಿನ ಭಾರತೀಯ ಸಾಂಸ್ಕೃತಿಕ–ಸಾಮಾಜಿಕ ಸ್ಥಿತಿಗತಿಗಳ ನೇರ ಪ್ರತಿಫಲನದಂತೆ ಇಲ್ಲಿ ದಾಂಪತ್ಯದ ಹಸಿಬಿಸಿಗಳ ಚಿತ್ರಣವಿದೆ.

ತಮ್ಮ ಕವಿತೆಯಲ್ಲಿ ಹೆಣ್ಣನ್ನು ಉದಾತ್ತೀಕರಿಸುವ ಬೇಂದ್ರೆ ಅವಳನ್ನು ಅ-ಮಾನವೀಕರಣಗೊಳಿಸಿ ಅವಳಿಂದ ಸಲ್ಲದ ಉತ್ತರ, ತ್ಯಾಗಗಳನ್ನು ನಿರೀಕ್ಷಿಸುವ ಪ್ರಯತ್ನದಲ್ಲಿ ತೊಡಗುತ್ತಾರೆಂದು ರಾಘವೇಂದ್ರರಾವ್ ಅವರ ಕವಿತೆಗಳ ನಿದರ್ಶನದೊಂದಿಗೆ ಸ್ಪಷ್ಟಪಡಿಸುತ್ತಾರೆ.

ಬೇಂದ್ರೆಯವರ ದಾಂಪತ್ಯ ಗೀತೆಗಳ ಜಗತ್ತು ಕೇವಲ ಪತಿ–ಪತ್ನಿಯಿಂದ ಕೂಡಿದ ಒಂಟಿ ಜಗತ್ತಲ್ಲ. ಅದು ಬಂಧು ಮಿತ್ರರಿಂದ ನಿಬಿಡವಾದ ಕೌಟುಂಬಿಕ ಜಗತ್ತು, ಏಕಕಾಲಕ್ಕೆ ವ್ಯಕ್ತಿನಿಷ್ಠವೂ, ವಸ್ತು ನಿಷ್ಠವೂ ಆಗುತ್ತದೆ. 'ಪತಿಯ ಸಮಾಜ ಸಮ್ಮುಖತೆ ಹಾಗೂ ಪತ್ನಿಯ ಕುಟುಂಬ ಸಮ್ಮುಖತೆಗಳ ನಡುವಿನ ದ್ವಂದ್ವವು ಬೇಂದ್ರೆಯವರ ದಾಂಪತ್ಯಗೀತೆಗಳ ಮುಖ್ಯ ಘರ್ಷಣಗಳಲ್ಲಿ ಒಂದನ್ನು ರೂಪಿಸಿದೆ'[೮].

ಬದುಕಿನ ಎಲ್ಲ ಪೋಷಕ ಶಕ್ತಿಗಳ ಪ್ರತೀಕವಾದ ತಾಯಿಯು ತಾಯ್ತನದಲ್ಲಿಯೇ ಹೆಣ್ಣಿನ ಜೀವನದ ಪರಮ ಸಾರ್ಥಕತೆಯನ್ನು ಪಡೆಯುತ್ತಾಳೆಂಬುದು ಬೇಂದ್ರೆಯವರ ಅಚಲವಾದ ನಂಬಿಕೆ. "ತಾಯಿತನದ ಆರಾಧನೆ ಮತ್ತು ಮಗುತನದ ಮುಗ್ಧತೆ, ಅಸಹಾಯಕತೆ ಹಾಗೂ ಹೊಣಗೇಡಿತನಗಳ ಕಡೆಗಿನ ಪಲಾಯನದ ನೆಲೆಗಳು ಬೇಂದ್ರೆ ಕವಿತೆಯ ಮುಖ್ಯ ಆಶಯದ ನೆಲೆಗೆ ಬರುತ್ತವೆ"[೯].

ಬೇಂದ್ರೆಯವರು ತಮಗೆ ನಿಕಟರಾದವರ ನೋವುಗಳಿಗೆ ಮಾತ್ರ ತಮ್ಮ ಕವಿತೆಯಲ್ಲಿ ತೆರೆದುಕೊಳ್ಳುತ್ತಾರೆ ಆದ್ದರಿಂದಲೇ ಅವರ ಕವಿತೆಗಳು ವರ್ಗ–ವರ್ಣಗಳ ಪರಿಮಿತಿಯನ್ನು ಮೀರಿ ನಡೆಯದೆ, ಸಮಾನಶೀಲರ ಹುಡುಕಾಟವಾಗಿ ಉಳಿಯುವ ಸೀಮಿತತೆಯನ್ನು ಪ್ರಕಟಿಸುತ್ತವೆ.

ಬೇಂದ್ರೆಯವರು ವ್ಯಕ್ತಿ ವಿಕಾಸ ಹಾಗೂ ಮಾನವೀಯ ಸಂಬಂಧಗಳಿಗೆ ಮಹತ್ವವನ್ನು ಕೊಟ್ಟು ಸಾಮಾಜಿಕ ಕರ್ಷಣಕ್ಕೆ ವಿಮುಖರಾಗುತ್ತಾರೆ. ಆದರೆ ಅವರು ಪ್ರತಿಗಾಮಿಯಾಗಲೀ, ಜನ ವಿರೋಧಿಯಾಗಲೀ ಅಲ್ಲ ಜನಸಾಮಾನ್ಯರ ಭಾಷೆಯನ್ನು ಆರಿಸಿಕೊಂಡು, ಮನುಷ್ಯ ಜೀವಿತದ ಆಗು ಹೋಗುಗಳ ಬಗೆಗೆ ಪ್ರೀತಿಯಿಂದ ಬರೆಯಬೇಕೆಂಬ ನಿಲುವೇ ಕವಿತೆಗಳಿಗೆ ವಿಚಿತ್ರವಾದ ಜೀವಶಕ್ತಿ ಹಾಗೂ ಸಾಮಾಜಿಕತೆಯನ್ನು ತಂದುಕೊಡುತ್ತದೆ. ಉದಾ: ಅವರ ಕುರುಡು ಕಾಂಚಾಣ, ಅನ್ನಾವತಾರಗಳನ್ನು ಗಮನಿಸಬಹುದು. ಅವರ ಇತರೆ ಕವಿತೆಗಳಿಗೆ ಹೋಲಿಸಿದರೆ ಸಾಮಾಜಿಕ ಕವಿತೆಗಳು ಸರಳವಾಗಿರುವುದನ್ನು ಗಮನಿಸುತ್ತೇವೆ. ಅಮೂರರು ಬೇಂದ್ರೆಯವರ ಸಾಮಾಜಿಕ ಧೋರಣೆಯನ್ನು 'ಧಾರ್ಮಿಕ ಮಾನವತಾವಾದ'ವೆಂದು ಕರೆದಿರುವುದುದು ಸರಿಯಾಗಿಯೇ ಇದೆ. ನವೋದಯ ಹಲವು ಸಾಹಿತಿಗಳಂತೆ ಬೇಂದ್ರೆಯವರು ಕೂಡ ಇಪ್ಪತ್ತನೆಯ ಶತಮಾದ ಉತ್ತರಾರ್ಧದಲ್ಲಿ ನಡೆದ ಸಾಮಾಜಿಕ ಚಲನವಲನಗಳನ್ನು ಸ್ಥಿತ್ಯಂತರದ ಹಂತದಲ್ಲಿ ಅನಿವಾರ್ಯದ ಗೊಂದಲಗಳೆಂದು ಗ್ರಹಿಸಲಿಲ್ಲ. ಒಟ್ಟಿನಲ್ಲಿ ಬೇಂದ್ರೆಯವರು ಜೀವನದ ಬಗೆಗೆ ತೋರಿದ ಆಸಕ್ತಿಯನ್ನು ಸಮಾಜದ ಬಗೆಗೆ ತೋರಿಸಲಿಲ್ಲ.

**ಧರ್ಮ:** ಬೇಂದ್ರೆಯವರು ತಮ್ಮ ಕಾವ್ಯದ ಪ್ರಾರಂಭದಿಂದಲೂ ನಿರಂತರವಾಗಿ ಗಾಢವಾದ ಆಧ್ಯಾತ್ಮವನ್ನು ಪ್ರಮುಖ ನೆಲೆಯಾಗಿಸಿಕೊಂಡಿದ್ದರು. ಕನ್ನಡ ಕಾವ್ಯ ಪರಂಪರೆಯಲ್ಲಿ ಭಕ್ತಿ–ಭಾದ್ಯತೆಗಳ ಸಂಯೋಜನೆಯ ವಿಶಿಷ್ಟ ದಾರಿಯನ್ನು ಆರಿಸಿಕೊಂಡ ಬೇಂದ್ರೆಯವರ ಕವಿತೆಗಳು ದೇವರ ಅಸ್ತಿತ್ವವನ್ನು ಶಂಕಿಸುವುದಿಲ್ಲ. ಮನುಷ್ಯ ಜೀವದ ಉನ್ನತೀಕರಣ ಹಾಗೂ ಅತಿ ಮಾನವತ್ವದ ಸಾಕಾರತೆಗೆ ದೈವೀಶಕ್ತಿಯ ಅನುಗ್ರಹ ಹಾಗೂ ತೀವ್ರವಾದ ಧಾರ್ಮಿಕ ತತ್ಪರತೆಗಳು ಅಗತ್ಯವೆಂದು ಬೇಂದ್ರೆ ಕಾವ್ಯ ನಂಬುತ್ತದೆ. ತಾತ್ವಿಕವಾಗಿ ಆದರ್ಶವಾದವನ್ನು ಒಪ್ಪಿಕೊಂಡರೂ, ಮಾನುಷ ಸಹಜ ಪರಿಮಿತಿಗಳ ಬಗ್ಗೆ ಸಹಾನುಭೂತಿಯನ್ನು ತೋರುತ್ತದೆ. ಬೇಂದ್ರೆಯವರು ತಮ್ಮ ಮುಖ್ಯ ಕವಿತೆಗಳಲ್ಲಿ ಬುದ್ಧಿ, ಹೃದಯ ಮತ್ತು ಇಂದ್ರಿಯಾನುಭಾವಗಳ ಅರ್ಥಪೂರ್ಣ ಸಂಯೋಜನೆಯನ್ನು ಅವು ಪರಸ್ಪರ ಅಭಿನ್ನವೆನ್ನುವಂತೆ ಬಳಸುತ್ತಾರೆ. ಕುವೆಂಪು ಒಂದು ಹಂತದಲ್ಲಿ ಅದ್ವೈತ ಸಿದ್ಧಾಂತದಿಂದ ಗಾಢವಾಗಿ ಪ್ರಭಾವಿತವಾಗಿದ್ದಾರೆ. ಬೇಂದ್ರೆಯವರು ದೇವ ಮತ್ತು ಜೀವ ತರ–ತಮ ಭಾವ ಹಾಗೂ ವ್ಯತ್ಯಾಸಗಳಲ್ಲಿ ನಂಬಿಕೆಯಿಡುತ್ತಾರೆ. ಕನ್ನಡ ಕವಿಗಳಲ್ಲಿಯೇ ಅತಿ

ಹೆಚ್ಚು ಪ್ರಾರ್ಥನಾ ಪದ್ಯಗಳನ್ನು ಬರೆದಿರುವ ಬೇಂದ್ರೆಯವರು ಅಮೂರ್ತವಾದುದನ್ನು ಮೂರ್ತವಾಗಿಸುವ ಹಂಬಲದಲ್ಲಿ ಬರೆಯುತ್ತಾರೆ."

"ಅನುಭವ ಹಾಗೂ ಅನುಭಾವಗಳ ನಡುವಿನ ಸಂಬಂಧವನ್ನು ಅಭಿನ್ನವಾಗಿ ಗ್ರಹಿಸುವ ಬೇಂದ್ರೆಯವರು ಜೀವನನಿಷ್ಠರು, ಅಧ್ಯಾತ್ಮ ಪ್ರವಣತೆಯ ಮೂಲಕ ಅನುಭಾವದ ಸೀಮೆಯಲ್ಲಿ ಸುಳಿದಾಡಿದ್ದಾರೆ". [೧೦]

ಅಧ್ಯಾತ್ಮ, ತಾತ್ವಿಕತೆ ಮುಂತೆಲ್ಲ ಆಶಯಗಳು ಕವಿತೆಗೆ ಅನುಷಂಗಿಕವಾಗಿ ಬರುತ್ತವೆ. ತಮ್ಮ ಕವಿತೆಯನ್ನು ಬೇರೆ ಯಾವುದಕ್ಕೋ ವಾಹಕವಾಗಿ ಮಾಡಿ ಬಿಡದೆ ಕವಿತೆಯಾಗಿಯೇ ಉಳಿಸುವ ಹಟವನ್ನು ಬೇಂದ್ರೆ ತೋರುತ್ತಾರೆ.

---

೭. ಕುರ್ತಕೋಟಿ, ೧೯೭೫, ೭೦,೭೬.

೮. ಅದೇ

೯. ಅದೇ ೧೩೭

೧೦. ರಂ.ಶ್ರೀ. ಮುಗಳಿ, ಬೇಂದ್ರೆ ಕಾವ್ಯ ೧೯೮೬, ೯೫

## ಪು.ತಿ.ನ ವೈಯುಕ್ತಿಕ ಹಿನ್ನೆಲೆ

ಪು.ತಿ.ನ ಅವರ ಜೀವನ ಪಥ ಮತ್ತು ವ್ಯಕ್ತಿತ್ವಗಳು ಉಳಿದ ಇಬ್ಬರು ಕವಿಗಳಿಗಿಂತಲೂ ಬೇರೆಯಾಗಿವೆ ಇದಕ್ಕೆ ಅವರ ಕೌಟುಂಬಿಕ ಹಿನ್ನೆಲೆ ಮತ್ತು ಪ್ರೇರಣೆಗಳು ಕಾರಣವಾಗಿವೆ.

ಬೇಂದ್ರೆಯವರ ಹಾಗೆ ಶಿಸ್ತುಗೇಡಿತನದ ಅಥವಾ ಕುವೆಂಪುವಿನ ಹಾಗೆ ಬೌದ್ಧಿಕ ಒಂಟಿತನದ ವಾತಾವರಣಕ್ಕೆ ಭಿನ್ನವಾಗಿ ಪುರುಷ ಪ್ರಧಾನವಾದ ವಿಚಾರ ಪ್ರಧಾನವಾದ ವ್ಯವಸ್ಥಿತ ವಾತಾವರಣದಲ್ಲಿ ಬೆಳೆದ ಪು.ತಿ.ನ ಸನಾತನ ವೈದಿಕ ಸಂಪ್ರದಾಯದ ಜಡ ಧಾರ್ಮಿಕ ಪರಂಪರೆಗಿಂತ ಭಿನ್ನವಾದ, ಜ್ಞಾನಪಿಪಾಸುವಾದ, ಚಿಂತನಶೀಲ ಆಯಾಮವನ್ನು ರೂಪಿಸಿಕೊಂಡರು.

ಭಾರತೀಯ ಸಂಸ್ಕೃತಿಯ ಸಾರಭೂತ ಪ್ರತಿನಿಧಿಯಾಗಿ ತಮ್ಮ ತಂದೆಯನ್ನು ಅತ್ಯಂತ ಅನುಕರಣೀಯ ಆದರ್ಶವಾಗಿ ಸ್ವೀಕರಿಸುವ ಮೂಲಕ ಹಿಂದಿನ ಪೀಳಿಗೆಯೊಂದಿಗೆ ದ್ವಂದ್ವ ವಾಗ್ವಾದ ರಹಿತವಾದ ಅನುಷ್ಠಾನತೆಯನ್ನು ಅನುಸಾಮ್ಯತೆಯನ್ನು ಕಂಡುಕೊಂಡಿರುವುದು ಪರಂಪರೆಯ ಬಗ್ಗೆ ಅವರಿಗಿರುವ ಗೌರವಕ್ಕೂ ಕಾರಣವಾಗಿದೆ. ಆದರೆ ತತ್ಕಾಲೀನ ವಾಸ್ತವದಲ್ಲಿ ಪರಂಪರೆಯ ವಿಕೃತ ಆಯಾಮಗಳು ಪ್ರತ್ಯಕ್ಷವಾಗಿರುವುದನ್ನು ಅವರು ನಿರೂಪಿಸುವುದಿಲ್ಲ.

ಗೊರೂರು ಪು.ತಿ.ನ ಬಗ್ಗೆ ಪರಿಚಯಿಸುತ್ತಾ ಅವರ ವ್ಯಕ್ತಿತ್ವದ ರಚನೆಯಲ್ಲಿ ಸ್ತ್ರೀ ಸಹಜ ಮಾರ್ದವವೊಂದು ಸೇರಿಕೊಂಡು ಅವರ ಕವಿ ಚೇತನದ ಕೊನೆಗೆ ನೀರೆರೆದಂತೆ ಕಂಡು ಬರುತ್ತದೆ. ಅವರು ಕೇವಲ ಪಂಡಿತರಾಗದಂತೆ ನೋಡಿಕೊಂಡಿರುವ ಈ ಗುಣವು ಯಾವ ಮೂಲದಿಂದ ಬಂದಿದೆ ಎನ್ನುವುದು ಸ್ಪಷ್ಟವಾಗುವುದಿಲ್ಲ. ಇದು ಪುರುಷ ಪ್ರಧಾನ ಪರಿಸರಕ್ಕೆ ತೋರಿಸಿದ ಅತಿ ಪ್ರತಿಕ್ರಿಯಾಗಿರಬಹುದು ಎನ್ನುತ್ತಾರೆ.

ಇತರ ಇಬ್ಬರು ಕವಿಗಳಿಗಿಲ್ಲದ ಸಮಾನ ಗುಣ ಪ್ರತಿಭೆ, ಯೋಗ್ಯತೆಯ ಮಿತ್ರಬಳಗದ ಒಡನಾಟ ಪು.ತಿ.ನ ರಿಗೆ ಲಭ್ಯವಾಗಿತ್ತು. ವಿಮರ್ಶಕನ ಪರವಾದ ಭಯ ಮುಕ್ತವಾದ ವೈಚಾರಿಕ ವಾತಾವರಣವೊಂದು ಅವರದಾಯಿತು. ಆದರೆ ಹಿಂದಿನಿಂದ ಇಂದಿನವರೆಗೆ ಅವರು ತಾವು ಹಿಡಿದ ಹಾದಿಯನ್ನು ಬದಲಿಸಲಿಲ್ಲ. "ಅವರ ಮೂಲಭೂತ ನಿಲುವುಗಳು ಅವರ ಸ್ನೇಹಿತರ ಸಾನಿಧ್ಯದಲ್ಲಿ ವ್ಯವಸ್ಥಿತವಾಗಿ ಮಂಡಿಸಲ್ಪಡುತ್ತದೆಯೇ ವಿನಃ ಪರಿವರ್ತನೆಯಾಗುವುದಿಲ್ಲ".[೧೧] ಆದರೆ ನಾನು ಜಗತ್ತನ್ನು ನಿರ್ಮಲತೆಯಿಂದ ಪರಿಭಾವಿಸಿ ನಿಶಿತಮತಿಯಿಂದ ಅದರ ಸಮಸ್ಯೆಗಳನ್ನು ಪರಿಶೀಲಿಸಿ ಅದಕ್ಕೆ ಸೂಕ್ತವಾದ ಪರಿಹಾರಗಳನ್ನು ಸೂಚಿಸಬಲ್ಲೆ ಎಂಬ ಆತ್ಮ ವಿಶ್ವಾಸ ಅವರದೆಂದು ತೋರುತ್ತದೆ.[೧೨]

ಪು.ತಿ.ನ ರವರ ಅಧ್ಯಯನ ವಸ್ತು, ಅಧ್ಯಯನ ಕ್ರಮಗಳು ಉಳಿದಿಬ್ಬರು ಕವಿಗಳಿಗಿಂತಲೂ ವ್ಯವಸ್ಥಿತವಾದವು. ಕಾಳಿದಾಸ, ವರ್ಡ್ಸ್‌ವರ್ತ್‌ನಿಂದ ವೇದಾಂತ, ವಿಜ್ಞಾನದಿಂದ ಅವರು ಪಡೆದ ಪ್ರಭಾವ ವಲಯಗಳು ವಿಶಾಲವು, ಆಳವೂ ಆದವು. ಅವರು ಎಂದಿಗೂ ವೈಚಾರಿಕ ಗೊಂದಲಗಳಲ್ಲಿ ಸಿಕ್ಕಿ ಹಾಕಿಕೊಳ್ಳುವುದಿಲ್ಲ. ಚಿಂತನೆಗೆ ಬೇಕಾದ ವ್ಯವಧಾನ ಅವರಿಗಿತ್ತು. ಆದ್ದರಿಂದಲೇ ಅವರ ಬರವಣಿಗೆಯ ಮೊತ್ತ ಸೀಮಿತವಾದುದು, ಆಲೋಚನೆಯ ಪ್ರಮಾಣ ಅಪರಿಮಿತವಾದುದು.

ಪು.ತಿ.ನ ರವರು ಜೀವನದ ವಿವಿಧ ಅನುಭವಗಳಿಗೆ ನೇರವಾಗಿ ತಮ್ಮನ್ನು ಒಡ್ಡಿಕೊಳ್ಳುವುದಿಲ್ಲ, ಹಾಗಾಗಿಯೇ ಕಾವ್ಯದಲ್ಲಿಯೂ ಲೋಕ ಜೀವನದ ಎಲ್ಲಾ ಮುಖಗಳ ಅಥವಾ ಬಹುಮುಖಗಳ ಅನಾವರಣದ ಕೊರತೆ ಕಾಣಿಸುತ್ತದೆ. ಆದರೆ ಅಂತಹ ಅನುಭಾವಗಳ ಅಗತ್ಯವಿಲ್ಲವೆನ್ನುವ ಕವಿ ಕಾವ್ಯದ ಮೂಲ ಸಾಮಗ್ರಿ ಪ್ರಾಮಾಣಿಕ ಜ್ಞಾನ, ಕವಿ ಸ್ವಾನುಭೂತಿಯೊಂದರಿಂದಲೇ ಅದನ್ನು ಪಡೆಯಬೇಕಾಗಿಲ್ಲ. ಚೆನ್ನಾಗಿ ಬರೆಯಲು ಪ್ರಯತ್ನಿಸುವ ಕವಿ ತಾನೆ ಕೆಡಬೇಕಾದ ಅಗತ್ಯ ಸ್ವಲ್ಪವೂ ಇಲ್ಲ.[೧೩] ಎಂಬ ನಿಲುವಿನಿಂದ ಬರೆಯತೊಡಗುತ್ತಾರೆ.

"ಪ್ರಸ್ತುತ ಸೌಂದರ್ಯ ವರ್ಣನೆ ಮತ್ತು ಮಾನವನ ಆಂತರಿಕ ಕರ್ಷಣೆಯ ಸಂದರ್ಭದಲ್ಲಿ ಮನುಷ್ಯತ್ವದ ಮೂಲ ಮಾದರಿಯನ್ನು ಪ್ರತಿಪಾದಿಸುತ್ತಾರೆಯೋ ಹೊರತು, ತತ್ಕಾಲೀನ ಮನುಷ್ಯನನ್ನಲ್ಲ. ಹಾಗಾಗಿಯೇ ತಮ್ಮ ಸೂಕ್ಷ್ಮ ಚಿಂತನೆ ಮತ್ತು ತೀವ್ರ ಭಾವನೆಗಳಿಗೆ ಸಮಂಜಸವಾದ ವಸ್ತು ಪ್ರತಿ ರೂಪಗಳನ್ನು ರೂಪಿಸಲು ಬೇಕಾದ ಸಾಮಗ್ರಿಗಳ ಕೊರತೆಯಿಂದ ಅವರ ಕಾವ್ಯ ಸೊರಗುತ್ತದೆ."[೧೪] ಪು.ತಿ.ನ ರವರಿಗೆ ಸಂಸ್ಕೃತಿ, ಸಾಹಿತ್ಯದ ಆಳವಾದ ಪರಿಚಯವಿತ್ತು, ಕನ್ನಡ ಸಾಹಿತ್ಯ ಸಂಪ್ರದಾಯಗಳ ನಿಕಟ ಪರಿಚಯ ಅವರಿಗಿದ್ದಂತಿಲ್ಲ.

ಪರಂಪರಾಗತ ವೈದಿಕ ವೃತ್ತಿಯಿಂದ ಕಾವ್ಯಾಧ್ಯಯನಕ್ಕೆ ಪುನರುಜ್ಜೀವನವಾಗುವ ಅವಕಾಶವನ್ನು ಮೈಸೂರಿನ ವಿದ್ಯಾಭ್ಯಾಸದ ಸಂದರ್ಭದಲ್ಲಿ ಪಡೆದರು. ಪು.ತಿ.ನ ಸ್ವಂತ ಅನುಭವದ ಫಲಿತಗಳಾದ ಆಲೋಚನೆಯನ್ನು ಮಂಡಿಸಿದರೇ ಹೊರತು ಆ ಅನುಭವಗಳನ್ನು ನಿರ್ಭೀಡೆಯಾಗಿ ತೆರೆದುಕೊಡಲಿಲ್ಲ. ಅಷ್ಟೇ ಅಲ್ಲ ಬದುಕಿನ ಬಗೆಗೆ ಅವರು ತಳೆದ ತಾತ್ವಿಕ ಧೋರಣೆಯೆಂದರೆ ತಾವು ಅದಕ್ಕಿಂತ ಎತ್ತರದ ಲೋಕದಲ್ಲಿ ಬದುಕಬೇಕೆನ್ನುವುದು.

## ಪು.ತಿ.ನ ಮತ್ತು ಕಾವ್ಯ ನವೋದಯ ಕಾವ್ಯ

ನವೋದಯ ಕವಿಗಳು ಪ್ರಕೃತಿಯ ಬಗ್ಗೆ ಮಾತನಾಡುವಾಗ ಆಧ್ಯಾತ್ಮಿಕ ಪರಿಭಾಷೆಯನ್ನು ಬಳಸುವ ಆಸಕ್ತಿಯನ್ನು ಮತ್ತೆ ಮತ್ತೆ ತೋರಿಸುತ್ತಾರೆ. ಅಲ್ಲದೆ ನಿಸರ್ಗದೊಳಗೆ ಮನುಷ್ಯನ ಒಡನಾಟದಲ್ಲಿ ಅವೆರೆಡರ ನಡುವಿನ ಸಂಬಂಧವನ್ನು ಬಗೆಯುವ ಪ್ರಯತ್ನಗಳೂ ಕಂಡು ಬರುತ್ತವೆ. ಪ್ರಕೃತಿಯ ಪರಿಭಾವನೆಯು ಆನಂದಾನ್ವೇಷಣೆಯ ಹಾಗೂ ಅದರ ಬಗೆಗಿನ ಕವಿತೆಯು ಆನಂದ ಸಂವಹನ ಮಾಧ್ಯಮವೆಂಬುದು, ಇಲ್ಲಿನ ಪ್ರಧಾನ ಧೋರಣೆಯಾಗಿದೆ.

**ಪ್ರಕೃತಿ:** ಪು.ತಿ.ನ ಹೇಳುವಂತೆ ನವೋದಯ ಕಾವ್ಯದಲ್ಲಿ ಪ್ರಕೃತಿ ಆತ್ಮೋದಯದ ಸಾಕ್ಷಿಯಂತೆ ಪ್ರಕಟವಾಗುತ್ತದೆ. "ಪ್ರಕೃತಿಯೊಂದಿಗಿನ ಸೌಂದರ್ಯೋಪಾಸನೆಯ ಸಂದರ್ಭದಲ್ಲಿ ಕುವೆಂಪು ಅವರಲ್ಲಿ ಉತ್ಸಾಹವೂ, ಪು.ತಿ.ನ ಅವರಲ್ಲಿ ವಿಷಾದವೂ, ಬೇಂದ್ರೆಯವರಲ್ಲಿ ಉಲ್ಲಾಸವೂ ಸೌಂದರ್ಯಾನುಭವದ ಸ್ಥಾಯಿಯಾಗಿರುವಂತೆ ತೋರುತ್ತದೆ."[೧೫]

ಪು.ತಿ.ನ ರವರ ಬಹಳಷ್ಟು ಪದ್ಯಗಳಲ್ಲಿ ಇರುಳಿನ ಪ್ರಸ್ತಾಪ ಕಂಡು ಬರುತ್ತದೆ. ಹಗಲಲ್ಲಿ ಕಾಣಲಾಗದ ಯಾವುದೋ ಸತ್ಯವನ್ನು ಕತ್ತಲು ಅಡಗಿಸಿಕೊಂಡಿದೆ ಎಂಬ ಭಾವ ವ್ಯಕ್ತವಾಗಿದೆ. ಹಗಲನ್ನು ಹೊಗಳಿರುವ ಕವಿತೆಗಳು ಅಲ್ಲಲ್ಲಿ ಕಂಡರೂ ವಿಶ್ವದ ನಿಜವಾಹ ಸ್ವರೂಪ ಇರುಳಿನಲ್ಲಿಯೇ ಗಮ್ಯವೆಂಬ ದನಿ ಮತ್ತೆ ಕೇಳಿಬರುತ್ತದೆ. ಆ ಇರುಳಾದರೂ ಜನನ ಮರಣಗಳಾಚೆಗಿನ ಶ್ಯಾಮ ಸುಂದರ ನಿಗೂಢತೆಗೆ ಸಾಕ್ಷಿಯಾಗುತ್ತಿದೆ.

ಈ ಕತ್ತಲು ಹಲವು ಕವಿತೆಗಳಲ್ಲಿ ಮಾತೆ ಕಾಳಿಯಾಗಿಯೂ ಕಾಣಿಸಿಕೊಂಡಿದೆ. ಅದು ಜಗತ್ತಿನ ಹಾಗೂ ಬೆಳಕಿನ ಚೈತನ್ಯದ ಮೂಲ ಅಲ್ಲದೆ ಅದು ಸೃಜನಶೀಲ ಧ್ಯಾನಕ್ಕೆ ಅನುವು ಮಾಡಿಕೊಡುವ ಒಳಮನದ ಕತ್ತಲೂ ಹೌದು. ಆದ್ದರಿಂದಲೇ ಕವಿ ತಾನು ಇರುಳ ಚೈತನ್ಯದ ಭಾಗವೆಂದು ಕರೆದುಕೊಳ್ಳುತ್ತಾನೆ. (ಕನ್ನಡದಲ್ಲಿ ಬೇಂದ್ರೆ ಬೆಳಕಿನ ಕವಿಯಾದರೆ, ಪು.ತಿ.ನ ಕತ್ತಲಿನ ಕವಿ ಆದರೆ ಇವೆರಡನ್ನು ಅವರು ಕ್ರಮವಾಗಿ ಚೈತನ್ಯದ ಮೂಲವಾಗಿ ಪರಿಗಣಿಸುತ್ತಾರೆ.)

ಜಡ ಪ್ರಪಂಚವನ್ನು ಸಹ ಸಚೇತನವಾಗಿ ಉತ್ಪ್ರೇಕ್ಷಿಸಿ ಎರಡರ ವರ್ತನೆಗಳನ್ನು ಏಕೀಕರಿಸಿ ಬರೆಯುತ್ತಾರೆ. ಕಥೆಯೊಂದರ ಮೂಲಕ ಮತ್ತೇನನ್ನೋ ಹೇಳುವ ಅನ್ಯೋಕ್ತಿ ವಿಧಾನ. (ಮೋಟು ಮರದ ಮೇಲಿನ ಮುದಿಗಳು). ಪು.ತಿನ ಅವರಿಗೆ ವಿಶಿಷ್ಟವಾದ್ದು, ಪ್ರಕೃತಿಯ ಸಾನಿಧ್ಯದಲ್ಲಿ ಕವಿ ಸದಾ, ಸರ್ವದಾ ಏಕಾಂಗಿಯಾಗಿ ರಸವಶವಾಗುತ್ತಾರೆ. ಪ್ರಕೃತಿಯ ವಿಧ್ವಂಸಕ ಮುಖವನ್ನು

ಕುರಿತಾದ ತಿಳುವಳಿಕೆ ಭಯ ಅವರ ಕವಿತೆಯಲ್ಲಿ ಅಪರೂಪ. ಪ್ರಕೃತಿಯನ್ನು ದೇವರ ಸ್ವರೂಪವೆಂದು ಆರಾಧಿಸುವ ಗುಣ ಪು.ತಿ.ನ ರಲ್ಲಿ ಕಂಡು ಬರುವುದಿಲ್ಲ.

ತನ್ನ ವಿಶಿಷ್ಟ ಶಕ್ತಿ ಸಂವೇದನೆಗಳಿಂದ ಪ್ರಕೃತಿಯು ಚೆಲುವಲ್ಲಿ ಆನಂದಾನುಭವ ಕಾಣುತ್ತಾರೆ ಮತ್ತು ಇವರು ಪ್ರಕೃತಿಯನ್ನು ಪರಿಭಾವಿಸುವುದು ವೈಯುಕ್ತಿಕ ನೆಲೆಯಲ್ಲಿಯೇ ಹೊರತು ಸಾಮಾಜಿಕ ನೆಲೆಯಲ್ಲಿ ಅಲ್ಲ. ತನ್ನ ಕಲೆಯ ವಿಧಾನಕ್ಕೆ ಪೂರಕವಾದ ಮತ್ತು ಅದು ತಲುಪುವ ಹಾದಿಯನ್ನು ಭಿನ್ನ ಹಾದಿಯಲ್ಲಿ ತಲುಪುವ ನೆಲೆಯಾಗಿ ತಿಳಿಯುತ್ತಾರೆ.

**ಮಾನವ ಜಗತ್ತು:** ಪು.ತಿ.ನ ರವರಲ್ಲಿ ಮನುಷ್ಯ ಲೋಕವು ನಾಟಕಗಳಲ್ಲಿ ಅದರೆಲ್ಲ ಭಾವ ತೀವ್ರತೆಗಳಿಂದ ಹೊಮ್ಮಿದಂತೆ ಅವರ ಕವಿತೆಗಳು ಅಭಿವ್ಯಕ್ತಿಯಾಗುವುದಿಲ್ಲ.

ಕ್ರಮೇಣ ಮನುಷ್ಯ ಸಂಬಂಧಗಳ ವಿಶ್ಲೇಷಣೆಯ ಅವರ ಕವಿತೆಗಳ ಇಳಿಮುಖ ರಚನೆಯಾಗುವುದರ ಜೊತೆಗೆ ನಿರ್ದಿಷ್ಟತೆಯಿಂದ ಮನುಕುಲದ ಸಾಮಾನ್ಯೀಕೃತ ಸ್ಥಿತಿಗಳನ್ನು ಪ್ರತಿನಿಧಿಸುತ್ತದೆ.

ಇವರ ಮೊದಲ ಕವಿತೆಗಳಲ್ಲಿ ಕಾಣಬರುವ ಅತಿನಿಷ್ಠೆಯಿಲ್ಲದ ನೈತಿಕ ಒತ್ತಡಗಳಿಗೆ ಮಣಿಯದ ಸಹಾನುಭೂತಿ ಪರ ನಿಲುವುಗಳು ನಂತರದ ಕವಿತೆಗಳಲ್ಲಿ ಕ್ರಮೇಣ ಬಿಗಿಗೊಳ್ಳುತ್ತಾ ಹೋಗುತ್ತವೆ.

ಪ್ರಣಯವನ್ನೇ ವಸ್ತುವಾಗಿಟ್ಟುಕೊಂಡ ಕೆಲವು ಕವಿತೆಗಳಲ್ಲಿ ಉಚಿತವಾದ ರಾಗಭಾವಗಳನ್ನು ತರುವುದರಲ್ಲಿ ಗೆಲ್ಲುತ್ತಾರೆ. "ತ್ಯಾಗ, ಒಲುಮೆಗಳಿರುವ ಸೂಕ್ಷ್ಮ ಸಂಬಂಧ ಮಾತ್ರವಲ್ಲ ಪ್ರೇಮ-ಕಾಮಗಳ ಅವಿನಾ ಸಂಬಂಧವನ್ನು ಇಲ್ಲಿ ಕವಿ ತಿಳಿದಿದ್ದಾರೆ. ಸಾಮಾಜಿಕ ಮೌಲ್ಯ ಮತ್ತು ವೈಯುಕ್ತಿಕ ಪ್ರವೃತ್ತಿಗಳ ನಡುವಿನ ಸಂಘರ್ಷದ ಫಲವಾಗಿ ಮೂಡುವ ವಿಷಾದ ಕೂಡ ಇವರಿಗೆ ತಿಳಿದಿದೆ."[೧೬]

ಭವಿತನದಲ್ಲಿ ಮಾತ್ರ ಕಾವ್ಯ ಸಾಧ್ಯ. ಕಾವ್ಯ ಮೂಲತಃ ಜ್ಞಾನಿಗಳ ಸ್ವತ್ತು ಎಂಬ ನಿಲುವಿನಿಂದ ಆರ್. ನಾಗರಾಜ್, ಪು.ತಿ.ನ ರವರು ಧಾರ್ಮಿಕ ಕಾವ್ಯದ ಕಡೆ ತಿರುಗಿ ಅವರ ಕಾವ್ಯ ಕ್ರಮೇಣ ತನ್ನ ಕಾವ್ಯ ಗುಣವನ್ನು ಕಳೆದುಕೊಂಡಿತು ಎಂದು ತೀರ್ಮಾನಿಸುತ್ತಾರೆ.

ಮನುಷ್ಯ ಸಂಬಂಧಗಳ ಎತ್ತರದ ಅನುಸಂಧಾನಗಳಲ್ಲಿ ಮುಖ್ಯವಾಗುವ ಪು.ತಿ.ನ ಮೇಲುನೆಲೆಯ ವ್ಯವಹಾರಗಳಲ್ಲಿ ಅನಾಸಕ್ತರಾಗುತ್ತಾರೆ.

ಅವರು ನಿರ್ಮಿಸಿಕೊಳ್ಳುವ ಪ್ರೀತಿ, ಜೀವಕಾಮದ ಕಾರಣದಿಂದ ಹುಟ್ಟಿದಲ್ಲ ತಾತ್ವಿಕವಾದ ತಿಳುವಳಿಕೆಯಿಂದ ಹುಟ್ಟಿದ್ದು ತ್ಯಾಗದ ಬಲದಿಂದ ಪು.ತಿ.ನ ರವರ ಕಾವ್ಯದಲ್ಲಿನ ಮನುಷ್ಯ ಲೋಕವು ಮೂಲಭೂತವಾಗಿ ಅವರ ವರ್ಣ ವರ್ಗಗಳಿಗೆ ಸೀಮಿತವಾಗಿದ್ದು, ವೈವಿಧ್ಯವನ್ನು ಕಳೆದುಕೊಂಡಿದೆ. ಅನುಭವ ಹಾಗೂ ಭಾಷೆಯ ಜನಪದೀಕರಣ ಅವರಲ್ಲಿ ಸಾಧ್ಯವಾಗಲಿಲ್ಲ ಎಂದು ರಾಘವೇಂದ್ರ ರಾವ್ ರವರು ಅಭಿಪ್ರಾಯಿಸುತ್ತಾರೆ.

**ಸಮಾಜ:** ಸಾಮಾಜಿಕ, ಧಾರ್ಮಿಕ, ನೈತಿಕ ಹಾಗೂ ತಾತ್ವಿಕ ಉಪದೇಶಗಳು ನಿಜವಾದ ಕವಿತೆಯ ರಸಾಸ್ವಾದಕ್ಕೆ ಮಾರಕವೆಂದರೂ ಅವರ ಸಾಮಾಜಿಕ ಚಿಂತನೆಯು ಬಹುಮಟ್ಟಿಗೆ ಕಾಲಾನುಗುಣವಾಗಿ ಸಮಾಜದಲ್ಲಿ ಆಗುತ್ತಿರುವ ಪರಿವರ್ತನೆಯ ಸ್ವರೂಪವನ್ನು ಕುರಿತಂತೆ ಇದೆ. ಭಾರತೀಯ ಜೀವನ ಕ್ರಮದ ನೆಲೆಗಟ್ಟನ್ನು ಸಡಿಲಿಸಿ ಅದರ ಮೌಲ್ಯ ವ್ಯವಸ್ಥೆಯ ವ್ಯತ್ಯಯಕ್ಕೆ ಕಾರಣವಾಗುವ ಪಾಶ್ಚಾತ್ಯ ಸಂದರ್ಭಗಳನ್ನು ಆತಂಕದಿಂದ ಗಮನಿಸಿದ್ದಾರೆ.

ಪುತಿನ ಅವರ ಪ್ರಜ್ಞೆಯಲ್ಲಿರುವುದು ವರ್ಣ ಸಾಮರಸ್ಯದ ಸಮಾಜವೇ ಹೊರತು ವರ್ಣಧಾರಿತ ವಿಭಜಿತ, ಶ್ರೇಣೀಕರಣದ ಇಂದಿನ ಸಮಾಜವಲ್ಲ.

ವಿಜ್ಞಾನ ಮತ್ತು ತಂತ್ರಜ್ಞಾನಗಳು ಬದುಕಿನ ಅನಿವಾರ್ಯವಾಗುವುದರ ಬಗ್ಗೆ ಮೂಲಭೂತ ತಿರಸ್ಕಾರವಿಲ್ಲದ ಪು.ತಿ.ನ ಅದು ಮನುಷ್ಯನ ಭಾವಸ್ತರಕ್ಕೆ ಆಘಾತವೆಸಗುವ ಅಪಾಯದ ಬಗ್ಗೆ ಆತಂಕಿತರಾಗುತ್ತಾರೆ ಹಾಗೂ ವಿಜ್ಞಾನದ ನಿಜವಾದ ನೆಲೆಗಳು ಸಾಮಾನ್ಯ ಮನುಷ್ಯನ ಮನೋವಿಕಾಸಕ್ಕೆ ವಿಮುಖವಾಗಿ ಉಳಿದಿರುವುದು ಅವರಿಗೆ ಸಮ್ಮತವಿಲ್ಲ.

ಭಾರತೀಯ ವರ್ಣ ವ್ಯವಸ್ಥೆಯ ವಿಷಮತೆಗಳನ್ನು ಪು.ತಿ.ನ ಕವಿತೆಯು ಗ್ರಹಿಸುವ ಪ್ರಯತ್ನದಲ್ಲಿದ್ದಂತೆ ಕಾಣುವುದಿಲ್ಲ. ಅವರ ಸನಾತನ ವೈದಿಕ ನೈಷ್ಟಿಕತೆಯು ಪರಂಪರೆಯ ಮುಂದುವರಿಕೆಯನ್ನು ನಂಬಿಕೊಂಡು ಅದಕ್ಕೆ ವಿರುದ್ಧವಾದ ಪಾಶ್ಚಾತ್ಯ ಪ್ರಭಾವಗಳನ್ನು ವಿರೋಧಿಸುತ್ತಾರೆ. ಅಲ್ಲದೆ ಯಾವುದೇ ಸಿದ್ಧಾಂತವೂ ಇವರನ್ನು ಆಕರ್ಷಿಸುವುದಿಲ್ಲ. ಗಾಂಧೀಜಿಯವರ ಬಗ್ಗೆ ಅಪಾರ ಗೌರವವಿದ್ದೂ, ಶಕ್ತಿಹೀನ ರಾಜಕಾರಣವನ್ನು ಒಪ್ಪುವುದಿಲ್ಲ.

**ಧರ್ಮ:** ಪು.ತಿ.ನ ರವರ ಧರ್ಮ ಸಂಬಂಧೀ ಚಿಂತನೆಗಳು ಸಾಮಾನ್ಯವಾಗಿ ತರ್ಕದಿಂದ ಸಮರ್ಥಿತವಾಗುತ್ತದೆ. ಮನುಷ್ಯ ಚೇತನದ ಉತ್ಕರ್ಷಕ್ಕೆ ಶ್ರೇಷ್ಟ ಪರಿಕರವಾಗುವ ಧರ್ಮವು ಸಾಮಾಜಿಕ ಸಂಸ್ಥೆಯಾಗಿ ಸೃಷ್ಟಿಸಿರುವ ಶ್ರೇಣೀಕರಣದಂತಹ ಅಪಾಯಗಳ ಬಗ್ಗೆ ಪು.ತಿ.ನ ಮೌನ ವಹಿಸುತ್ತಾರೆ. ಬದುಕನ್ನು ಅದರ ಎಲ್ಲ ಸಂಕೀರ್ಣತೆಗಳೊಂದಿಗೆ ಸಮಗ್ರವಾಗಿ ಗ್ರಹಿಸುವ ಶಕ್ತಿಯು ಧರ್ಮದಿಂದ ಒದಗಿ ಬರುವುದೆಂದು ಅವರ ಕವಿತೆಯು ನಂಬುತ್ತದೆ. ಪೌರಾಣಿಕ ಪ್ರತಿಮೆಗಳ

ಮೂಲಕ ಸಮಕಾಲೀನ ಬದುಕನ್ನೂ ಶೋಧಿಸುತ್ತಾರೆ. ಹಾಗೆಯೇ ಮೂರ್ತವಾದ ಐಂದ್ರಿಕ ಅನುಭವಗಳಿಂದ ಅಮೂರ್ತತೆಯ ಕಡೆಗೆ ಚಲಿಸುತ್ತಾರೆ.

---

೧೫. ಸೌಂದರ್ಯ ಸಮೀಕ್ಷೆ ಜಿ.ಎಸ್.ಎಸ್ ೧೬೫

೧೬. ೧೭೨ ಹಾಡೇ ಹಾದಿಯ ತೋರಿತು.

## ಅಧ್ಯಾಯ ೪

# ಕುವೆಂಪು ಕಾವ್ಯದಲ್ಲಿ ನಾಡು-ನುಡಿ ಚಿಂತನೆ

ಕಳೆದ ಶತಮಾನದ ಕನ್ನಡ ಸಾಹಿತ್ಯ ಚರಿತ್ರೆಯನ್ನು ಇಂದು ಸಮಗ್ರವಾಗಿ ಹಿಂದಿರುಗಿ ನೋಡಿದಾಗ ಸಾಂಸ್ಕೃತಿಕವಾಗಿ ಕುವೆಂಪು ಅವರಿಗಿರುವ ಮಹತ್ವ ಬಹುಶಃ ಮತ್ತಾವ ಕನ್ನಡ ಲೇಖಕರಿಗೂ ಇಲ್ಲವೆನಿಸುತ್ತದೆ. ಉಳಿದ ಶ್ರೇಷ್ಠ ಲೇಖಕರ ಸಾಹಿತ್ಯ ಸಾಧನೆಯನ್ನು ಗೌರವಿಸಿಯೂ ಕುವೆಂಪು ಅವರಿಗಿರುವ ಸಾಂಸ್ಕೃತಿಕ ಅನನ್ಯತೆಯನ್ನು ಒಪ್ಪಬೇಕಾಗುತ್ತದೆ.

"ಕುವೆಂಪು ಒಂದು ರೀತಿಯ ಎಚ್ಚರದ ಪ್ರಜ್ಞೆಯಾಗಿ ತಮ್ಮ ಕವಿತೆಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಅದು ಕೆಲವೊಮ್ಮೆ ಉದ್ಘೋಷದ ಸಂದೇಶದ ರೂಪ ತಾಳಿಬಿಡುತ್ತದೆ. ಜೊತೆಗೆ ಕುವೆಂಪು ತಮ್ಮ ಕಾಲದ ಸಾಮಾಜಿಕ ಘಟನೆಗಳ ಉದ್ದಕ್ಕೂ ತೀವ್ರವಾಗಿ ಸ್ಪಂದಿಸಿದ್ದಾರೆ, ಪ್ರತಿಕ್ರಿಯಿಸಿದ್ದಾರೆ. ಈ ಸ್ಪಂದನ, ಪ್ರತಿಕ್ರಿಯೆಗಳು ಕವಿತೆಯ ರೂಪ ತಾಳಿವೆ ಬಹುಶಃ ಕನ್ನಡ ಸಾಹಿತ್ಯದಲ್ಲಿ ಕುವೆಂಪು ಅವರಂತೆ ಸಮಕಾಲೀನ ಘಟನೆಗಳಿಗೆ ಇಷ್ಟೊಂದು ತೀವ್ರವಾಗಿ ಸ್ಪಂದಿಸಿದ ಪ್ರತಿಕ್ರಿಯಿಸಿದ ಮತ್ತೊಂದು ಉದಾಹರಣೆ ಕಷ್ಟ." [೧]

ಕುವೆಂಪು ಅವರ ಕಾವ್ಯದಲ್ಲಿ ನವ ಭಾರತ ನಿರ್ಮಾಣದ ಆಶಯಗಳು ಧಾರಾಳವಾಗಿವೆ. ಆದರೆ ಅದಕ್ಕಿಂತಲೂ ನಿರ್ದಿಷ್ಟವಾಗಿ ಶೂದ್ರ ಪ್ರಜ್ಞೆಯ ಜಾಗೃತಿ ಹಾಗೂ ಕನ್ನಡತ್ವ ನಿರ್ಮಾಣ ಎಂಬ ಆಶಯಗಳು ಪ್ರಧಾನವಾಗಿ ಕಂಡು ಬರುತ್ತದೆ. ಮೇಲ್ಜಾತಿಯಿಂದ ಬಂದ ಸಾಹಿತಿಗಳಲ್ಲಿ ಭಾರತ ಪ್ರಜ್ಞೆಯಾಗಿ, ವಿಶ್ವ ಪ್ರಜ್ಞೆಯಾಗಿ ಪ್ರಕಟಗೊಳ್ಳುವ ದೇಶಾಭಿಮಾನ-ಜನಾಭಿಮಾನ ಎಂಬುದು ಕುವೆಂಪು ಅವರಲ್ಲಿ ನಾಡ ಅಭಿಮಾನವಾಗಿ ಕನ್ನಡಾಭಿಮಾನವಾಗಿ ಪ್ರಕಟಗೊಳ್ಳುವ ರೀತಿಗೆ ಖಂಡಿತವಾಗಿ ನಮ್ಮ ಸಾಮಾಜಿಕ ಸಂದರ್ಭದ ಹಿನ್ನೆಲೆಯಿದೆ ಎಂದು ಬಂಜಗೆರೆ ಪ್ರತಿಪಾದಿಸುತ್ತಾರೆ.

ನವೋದಯ ಕಾವ್ಯ ಸಂದರ್ಭದ ಸಮಕಾಲೀನ ಆಗು-ಹೋಗುಗಳ ಬಗೆಗಿನ ತಮ್ಮ ಚಿಂತನೆಯನ್ನು ಬರಹದ ವಿವಿಧ ನೆಲೆಗಳಲ್ಲಿ ಕುವೆಂಪು ಅಭಿವ್ಯಕ್ತಿಸಿದ್ದಾರೆ. ಅಂದಿನ ರಾಜಕಾರಣದ ಸುತ್ತ ಮುತ್ತಲಿನ ಪರಿಸರ, ಸ್ವಾತಂತ್ರ್ಯ ಚಳುವಳಿ, ಕರ್ನಾಟಕ ಏಕೀಕರಣ ಕುವೆಂಪು ಅವರನ್ನು ಕಾವ್ಯದ ಮೂಲಕ ಪ್ರತಿಕ್ರಿಯೆ ನೀಡುವಂತೆ ಮಾಡಿದವು. ಈ ಎರಡೂ ಚಳವಳಿಗೆ ಬೇಕಾದ ಪ್ರೇರಣೆಗಳನ್ನು ಕನ್ನಡ ಕಾವ್ಯ ಸಂದರ್ಭದಲ್ಲಿ ಕುವೆಂಪು ಕಾವ್ಯಚಿಂತನೆಯು ಒದಗಿಸಿತು. ಹೀಗಾಗಿ ಈ ಎರಡೂ ಆಯಾಮಗಳನ್ನು ಗಮನದಲ್ಲಿಟ್ಟುಕೊಂಡು ಅಂದಿನ ರಾಷ್ಟ್ರ ಚಿಂತನೆಯನ್ನು ಪರಿಶೀಲಿಸುವುದು ಸೂಕ್ತ. ನಾಡು-ನುಡಿಯ ಬಗೆಗಿನ ಅರಿವು ಅಭಿಮಾನದ ಭಾವನೆಯನ್ನು

ಜಾಗೃತಗೊಳಿಸುವಂತಹ ಕವನಗಳಲ್ಲಿ ಕುವೆಂಪು ಪಾತ್ರ ಪ್ರಮುಖವಾದುದು. ಕುವೆಂಪು ಹೆಸರು ಕನ್ನಡದೊಂದಿಗೆ ಹಾಸು ಹೊಕ್ಕಾಗಿ ಬಂದಿದೆ.

ಮೊದಲಿಗೆ ತಮ್ಮ ಹುಟ್ಟೂರು, ಅಲ್ಲಿನ ಪ್ರಕೃತಿ ವಿಷಯಗಳೊಂದಿಗೆ ಸ್ಥಳೀಯ ಮಹತ್ವದ ವಿಚಾರಗಳನ್ನು ಮೈಗೂಡಿಸಿಕೊಂಡು ಬರೆಯುತ್ತ (ಲಲಿತಾದ್ರಿ ಕವಿತೆಯಲ್ಲಿ) ಲಲಿತಾದ್ರಿ ಬೆಟ್ಟದ ಮೇಲಿಂದ ಕನ್ನಡ ನಾಡಿನ ಪ್ರಕೃತಿ ಸೌಂದರ್ಯವನ್ನು ಹಾಗೂ ಕನ್ನಡಿಗರ ಎಲ್ಲ ರೀತಿಯ ವಿಶೇಷಗಳನ್ನು ಪ್ರತಿಪಾದಿಸುವುದು ಕವಿಯ ಆಶಯ. ಇಲ್ಲಿ ಕನ್ನಡದ ಪ್ರತಿಬಿಂಬವಾಗಿ ಹಳೆಯ ಮೈಸೂರು ಸಂಸ್ಥಾನವನ್ನು ಪ್ರತಿಪಾದಿಸುತ್ತಾರೆ.

ಜೊತೆಗೆ ಕನ್ನಡಿಗರ ತುಂಡಾದ ಭೂಪ್ರದೇಶಗಳು ಭಿನ್ನ ಭಾಷಿಕ ಒತ್ತಡಗಳಿಂದ ಮುಕ್ತವಾಗಲು ಕನ್ನಡ ಪ್ರದೇಶಗಳ ಒಂದುಗೂಡುವಿಕೆಯನ್ನು ಗೊಮ್ಮಟನ ಮೂಲಕ ಆಶಿಸುತ್ತ "ನಿನ್ನ ಕನ್ನಡ ನಾಡನೊಂದು ಗೂಡಿಸಿ ಕಾಯಿ" ಎಂದು ಅವನನ್ನು ಬೇಡುತ್ತಾರೆ. ಸಾಂಸ್ಕೃತಿಕ ಹಿನ್ನೆಲೆಯಿಂದ ನಾಡನ್ನು ಕಟ್ಟುವ ಪ್ರಕ್ರಿಯೆಯೊಂದು ಕುವೆಂಪು ಚಿಂತನೆಯ ಹಿಂದಿದೆ.

ತಮ್ಮ ಹಿಂದಿನ ಕವಿ ಪರಂಪರೆ ಹಾಗೂ ಕಾವ್ಯ ಪರಂಪರೆಯನ್ನು ಸಾಕ್ಷಾತ್ಕರಿಸಿಕೊಳ್ಳುವ ಭಾಷಿಕ, ದೇಶೀಯ ಅಭಿಮಾನವು (ಓ ನನ್ನ ಕನ್ನಡವೇ ಕವಿತೆಯಲ್ಲಿ) ಏಕೀಕರಣದ ಚಿಂತನೆಗೆ ಚಾಲನೆ ನೀಡುವಂಥದ್ದು.

ಭಾಷೆಯನ್ನು ಧಾರ್ಮಿಕ ನೆಲೆಯಲ್ಲಿ ಔನ್ನತ್ಯಗೊಳಿಸಿ ಹರಿಹರರ ಭಾಷೆಯಿಂದ ಕನ್ನಡದಲ್ಲಿ ಸೇವೆಗೈಯ್ಯುವ ಕನ್ನಡಿಗರ ಭಕ್ತಿಯನ್ನು ಹುಟ್ಟು ಹಾಕುತ್ತಾರೆ. ಸಿರಿಗನ್ನಡದಲ್ಲಿ ಕವಿತೆಯ ಹಾಡಿ (ಕನ್ನಡ) ಅದರ ಏಳಿಗೆಯನ್ನು ನೋಡಿ ಅದರ ಸೇವೆಯಲ್ಲಿ ಜೀವ ಸಾರ್ಥಕ್ಯ ಪಡೆಯುವ ಮುಗ್ಧತೆಯೇ ಮೈವೆತ್ತಂತಿರುವ ಭಾವವು "ಕನ್ನಡ! ಕನ್ನಡ" ಹಾ ಸವಿಗನ್ನಡ" ಎಂದು ಹೃದಯ ತಣಿಯೆ ಹಾಡುತ್ತದೆ. ಇಂಥ ನವೀನ ಹೃದಯವನ್ನು ಎಚ್ಚರಿಸಿ 'ನವ ಅರುಣೋದಯಕ್ಕೆ ಕವಿ ತಯಾರಿ ನಡೆಸುತ್ತಾರೆ.'

ಇಂಡಿಯಾದ ಅಧೀನ ಸ್ಥಿತಿಯಲ್ಲಿ ಕನ್ನಡ ಶ್ರೇಯಸನ್ನು ಸ್ವಾತಂತ್ರ್ಯದ ಜೊತೆಗೆ ಸಾಕಾರ ಮಾಡಿಕೊಳ್ಳುವ ಚಿಂತನೆಯಲ್ಲಿ ವಸಾಹತುಶಾಹಿ ಕಾಲಘಟ್ಟದ ವಿಷ ವರ್ತುಲದ ವಾಣಿಯನ್ನು ಅರಿವಿಗೆ ತರುತ್ತಾರೆ. (ಭಾರತ ತಪಸ್ವಿನಿ) ತಪಸ್ವಿಯು ಮತ್ತೆ 'ಚಕ್ರವರ್ತಿ'ಯಾಗಿ ಪಟ್ಟವೇರುವ ಆಶಯ ನಂಬಿಕೆ ಕವಿಗಿದೆ. "ಈ ವಿಚಾರಳು ಜಾಗೃತವಾದ ರಾಷ್ಟ್ರೀಯತೆಯ ಸಂಕೇತವಾಗಿ ಕವಿತೆಗಳಲ್ಲಿ ಹೊರ ಹೊಮ್ಮಿದೆ".[3] ಭಾರತದ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಕನ್ನಡ–ಕನ್ನಡಿಗ

ಕರ್ನಾಟಕಗಳ ಪರಿಕಲ್ಪನೆಯನ್ನು ಸೂಕ್ತ ನೆಲೆಗಳಲ್ಲಿ ಜೋಡಿಸುವ ಕುವೆಂಪು 'ತಾಯ್ನುಡಿಯ' ಪರಿಸ್ಥಿತಿಗಳನ್ನು ಮನವರಿಕೆ ಮಾಡಿಕೊಡುತ್ತಾರೆ. ಸ್ವಾತಂತ್ರ್ಯ ನಂತರದ ಕುವೆಂಪು ಕಾವ್ಯ ಚಿಂತನೆಗಳು ಒಟ್ಟಾಗಿ ಕನ್ನಡ ಭಾಷೆ ಕರ್ನಾಟಕದ ಒಂದುಗೂಡುವಿಕೆ ಕಡೆಗೆ ಕೇಂದ್ರೀಕೃತವಾಗುವುದನ್ನು ನೋಡಬಹುದು. ತಮ್ಮ ಕನಸುಗಳು ಮತ್ತು ಕಾವ್ಯದ ಆದರ್ಶಗಳು ಛಿದ್ರವಾಗುತ್ತಿರುವ ಆತಂಕ ಅವರಲ್ಲಿ ಕಾಣಿಸಿಕೊಂಡಿದೆ. ಸ್ವಾತಂತ್ರ್ಯದ ಅನಂತರ ಏಕೀಕರಣವು ಕೈಗೂಡುವುದೆಂಬ ಅವರ ನಂಬಿಕೆಗೆ ಬಿದ್ದ ಪೆಟ್ಟಿಗೆ ಉದ್ಘರಿಸುತ್ತ "ಎಂಥ ಮುಕ್ತಿಯೋ, ನನ್ನನಾಳ್ವನೊಡ್ಡಿದ ಬಲೆ ಇದು; ಬರಿ ಕುಯುಕ್ತಿಯೋ". (ಭರತ ಮಾತೆ) ಎಂದು ಆಶಾಭಂಗವನ್ನು ಅನುಭವಿಸುತ್ತಾರೆ. ಪರಿಣಾಮದ ಆವೇಶದಲ್ಲಿ ಅನ್ಯಭಾಷಿಕರನ್ನು ನೋಡಿ ಭಾಷಾಭಿಮಾನವನ್ನು ರೂಢಿಸಿಕೊಳ್ಳಬೇಕೆಂದು ಕನ್ನಡಿಗರ ಅಭಿಮಾನಗೇಡಿತನವನ್ನು ಕೆಚ್ಚಿನಿಂದ ಪುನರುಚ್ಚಿಸುವ ಸಾಹಸ ಮಡುತ್ತಾರೆ. ಇದಕ್ಕಾಗಿ ಚರಿತ್ರೆಯ ಪ್ರತೀಕ ಸಂಕೇತಗಳನ್ನು ಬಳಸುತ್ತಾರೆ. ಹಂಪಿಯ ಪಾಳಾದ "ಕನ್ನಡಾರಾಮವನ್ನು" ವಿರೂಪಾಕ್ಷನ ಕಣ್ಣೀರನ್ನು ಪರಿಚಯಿಸುತ್ತಾರೆ. ಹಂಪಿ ಅವರಿಗೆ 'ಕಲಿಯುಗದ ಹಿರಿಮಸಣವೂ ಹೌದು, ಜೊತೆಗೆ ತೆಂಕಣದ ರಾಶಿಯು' ಹೌದು.

ಕರ್ನಾಟಕದ ಏಕೀಕರಣವನ್ನು ಆಗಮಾಡದಂತಹ ಒಳ ಒತ್ತಡಗಳನ್ನು ಬದಲಾದ ಗಾಡವಾದ ರಾಜಕೀಯ ಒತ್ತಡಗಳಲ್ಲಿ ಗ್ರಹಿಸಿ ಅದಕ್ಕೆ ಎರಡು ರೀತಿಯಲ್ಲಿ ಪ್ರತಿಕ್ರಿಯಿಸುತ್ತಾರೆ. ಕನ್ನಡಿಗರಲ್ಲಿ ಆವೇಶಾತ್ಮಕವಾದ ಪ್ರಕ್ರಿಯೆಗಳು ಒಡ ಮೂಡುವಂತೆ ಮಾಡುತ್ತಾರೆ. ಈ ಪ್ರಕ್ರಿಯೆಗಳಿಗೆ ಚರಿತ್ರೆಗಿಂತ ಸಾಹಿತ್ಯಕ ಪರಂಪರೆಯನ್ನು ಹೆಚ್ಚು ಹೆಚ್ಚಾಗಿ ದುಡಿಸಿಕೊಳ್ಳುತ್ತಾರೆ.

ಈ ಘಟ್ಟದಲ್ಲಿ ಅವರು

"ಕಣ್ದೆರೆಯಿರೇಳಿ, ಓ ಕನ್ನಡ ಮಕ್ಕಳಿರ, ಗರ್ಜಿಸುವುದನ್ನು ಕಲಿತು ಸಿಂಹವಾಗಿ" (ಸಾಯುತಿದೆ ನಿಮ್ಮ ನುಡಿ; ಓ ಕನ್ನಡದ ಕಂದರಿರ) ಎಂದು ಅನ್ಯರ ಅಧಿಪತ್ಯವನ್ನು ಒಪ್ಪಿ ಕಣ್ಮುಚ್ಚಿ ಕುಳಿತವರ ಕುರಿತನವನ್ನು ಖಂಡಿಸುತ್ತ ಸಿಂಹ ಪೌರುಷವನ್ನು ಉದ್ದೀಪಿಸುವ ದಿಟ್ಟತನದ ಮಾತುಗಳಲ್ಲಿ ಅವರಿಗೆ ಏಕೀಕರಣದ ಆಶಯವೇ ಮುಖ್ಯವಾಗಿರುವುದನ್ನು ತೋರಿಸುತ್ತದೆ. ಅಲ್ಲದೆ ಕನ್ನಡಿಗರೆ ಏಕೀಕರಣದ ಬಗ್ಗೆ ಭಿನ್ನವಾಗಿ ಯೋಚಿಸುತ್ತಿದ್ದುದು, ಅವರನ್ನು ವಿಚಲಿತರನ್ನಾಗಿ ಮಾಡಿತ್ತು.

ಕರ್ನಾಟಕದ ಏಕೀಕರಣವನ್ನು ಅನಿವಾರ್ಯವಾಗಿಸಿಕೊಂಡು ಕುವೆಂಪು ನಾಡಿನ ಕವಿಗಳ, ನದಿಗಳ ಪಶು–ಪಕ್ಷಿ, ಸೂರ್ಯ–ಚಂದ್ರ, ದೇವತೆಗಳ, ಪತಿ–ಪತ್ನಿಯರ, ಮಕ್ಕಳ ಹೀಗೆ ಎಲ್ಲರ ಮೇಲೆ ಆಣೆ ಮಡಿ ದೀಕ್ಷೆ ಕೊಡಿಸುತ್ತಾರೆ.

"ದೀಕ್ಷೆಯ ತೊಡು ಇಂದೇ

ಕಂಕಣ ಕಟ್ಟಿಂದೇ

ಕನ್ನಡ ನಾಡೊಂದೇ

ಇನ್ನೆಂದೂ ತಾನೊಂದೆ" (ಕರ್ನಾಟಕ ಮಂತ್ರ ದೀಕ್ಷೆ)

ಎಂದು ದೃಢ ಇಂಗಿತವನ್ನು ವ್ಯಕ್ತ ಪಡಿಸುತ್ತಾರೆ.

ಭರತ ಮಾತೆಯ ವಿಷಯದಲ್ಲಿ ಮೇರೆವರಿಯದ ಭಕ್ತಿಯ ಕವಿಯ ಪ್ರತಿಭೆಯು ಆ ಪುಣ್ಯೆಯ ಮಗನಾಗಿ ಪುಣ್ಯತನವನ್ನು ಅನುಭವಿಸುತ್ತ, "ಭಾರತಾಂಭೆಯೆ, ಜನಿಸಿ ನಿನ್ನೊಳು ಧನ್ಯನಾದೆನು ದೇವಿಯೇ ನಿನ್ನ ಪ್ರೇಮದಿ ಬೆಳೆದು ಜೀವವು ಮಾನ್ಯವಾದುದು ತಾಯಿಯೇ" ಎಂದು ಪುನೀತವಾಗುತ್ತದೆ. ಅವಳೆಲ್ಲ ಕುಂದು ಕೊರತೆಗಳ ನಡುವೆಯು ಕರುಳ ಮಿಡಿತವೊಂದು ಅನ್ಯಕ್ಕೆಳಸದಂತೆ ಕವಿಯನ್ನು ವಾತ್ಸಲ್ಯಗೊಳಿಸುತ್ತದೆ.

ಇದೇ ಮನೋಭಾವದಲ್ಲಿ

"ನಿನ್ನ ಮೈಮೆಯ ಬರೆವನು, ನಿನ್ನ ಹೆಸರನೆ ಕರೆವನು, ನಿನ್ನ ಸೇವೆಯೊಳಳಿವ ಭಾಗ್ಯಕೆ ಸಕಲ ಭಾಗ್ಯವ ತೊರೆವೆನು" ಎಂದು ತ್ರಿಕರಣ ಪೂರ್ವಕವಾಗಿ ಅವಳ ಸೇವೆಗೆ ತಮ್ಮನ್ನು ಉಜ್ಜುಗಗೊಳಿಸಿಕೊಳ್ಳುತ್ತಾರೆ.

ಕುವೆಂಪು ಅವರ ಮೊದಲ ಕವನ ಸಂಕಲನ (ಕೊಳಲು)ದಲ್ಲಿಯೇ ದೇಶ ಪ್ರೇಮದ ಇಂತಹ ಉತ್ಕಟ ಭಾವವನ್ನು ಕಾಣಬಹುದು.

ತಮ್ಮ "ಜಯ ಹೇ ಕರ್ನಾಟಕ ಮಾತೆ" ಕವಿತೆಯಲ್ಲಿ ಕುವೆಂಪು ಏಕೀಕೃತ ದೇಶ ಕಲ್ಪನೆಯ ವಿರುದ್ಧದ ಅಧಿಕಾರಿ ವಿಕೇಂದ್ರಿಕರಣದ ಪರವಾಗಿ ರಾಜಕೀಯ ಪ್ರತಿ ಸಂಸ್ಕೃತಿಯನ್ನು ಬಹು ಸಂಸ್ಕೃತಿಯನ್ನು ಆಶಿಸುತ್ತಿದ್ದಾರೆ.

"ಜಯ ಭಾರತ ಜನನಿಯ ತನುಜಾತೆ

ಜಯ ಹೇ ಕರ್ನಾಟಕ ಮಾತೆ"

ಎಂದು ಕನ್ನಡ-ಭಾರತಗಳನ್ನು ಮಾತೃ ಪ್ರೇಮದಲ್ಲಿ ಬೆಸುಗೆಗೊಳಿಸಿ ತಾಯಿಯ ಮೂಲಕ ಮಗಳು ಕರ್ನಾಟಕದ ವೈಭವೋನ್ನತಿಯ ಘನತೆಯನ್ನು ಅಭಿಮಾನದಿಂದ ಹಾಡಿಕೊಳ್ಳುತ್ತಾರೆ. "ಕುವೆಂಪು ಅವರ ರಾಷ್ಟ್ರೀಯ ವಾದವು ದ್ವಂದ್ವದಿಂದ ಕೂಡಿದೆ ಎನಿಸಿದರೂ ರಾಷ್ಟ್ರೀಯತೆ ಮತ್ತು ಪ್ರಾಂತೀಯತೆಯ ಅವರ ಪರಿಕಲ್ಪನೆಗಳು ಒಂದಕ್ಕೊಂದು ವೈರುದ್ಯದಲ್ಲಿ ಇಲ್ಲ, ರಾಷ್ಟ್ರೀಯತೆಯೆಂಬುದು ಒಂದು ಭಾವ ಸೃಷ್ಟಿ ಪ್ರಾಂತೀಯತೆ ಎಂಬುದು ಕಣ್ಣಿಗೆ ಕಾಣುವ ಬದುಕಿನ ಸೃಷ್ಟಿ" [೩]

ಇದು ಪ್ರತಿಯೊಬ್ಬನ ಒಳಗಿನ ಪ್ರಜಾಸತ್ತಾತ್ಮಕತೆಯನ್ನು ಅನನ್ಯತೆಯನ್ನು ಗುರುತಿಸುವ ವಿಧಾನ. ಭಾರತ ಆಗಿರುವುದು ಏಕತೆಯಿಂದಲ್ಲ ಅನೇಕತೆಯಿಂದ ಮಾತ್ರ ಅದು ಸಾಧ್ಯ ಎಂಬ ನಿಲುವಿನಿಂದ ಅದಕ್ಕೇ ಅವರು,

> "ಬಾರಮ್ಮ ದೇವಿ ಓ, ತಾಯಿ ಭಾರತಿಯೇ
>
> ನಿನ್ನ ಮಗಳನ್ನು ಹರಸಿ . . . . . . . .
>
> ನಿನ್ನ ಋಷಿಜನ ಬರಲಿ ನಿನ್ನ ಕವಿಜನ ಬರಲಿ
>
> ಕನ್ನಡಾಂಬೆಯ ಹರಸಿ ಹಾರೈಸಲಿ".

ಎಂದು ಬೇಡಿಕೊಳ್ಳುತ್ತಾರೆ. ಸಮಾಜದ ದೌರ್ಭಾಗ್ಯಕ್ಕೆ ಪರತಂತ್ರವಷ್ಟೇ ಕಾರಣವಲ್ಲದೆ ಆ ಸಮಾಜದ ಆಂತರಿಕ ಅಧಿಪತ್ಯಗಳು ದುಡಿಯುವವರ ಹೆಗಲ ಮೇಲೆ ದಾಸ್ಯದ ನೊಗ ಹೊರಿಸಿರುವ ವರ್ಣ ಪ್ರಜ್ಞೆಯ ಆಳವಾದ ಪರಿಣಾಮವನ್ನು ಕುರಿತು ಕುವೆಂಪು ಚಿಂತಿಸುತ್ತಾರೆ. ಈ ವರ್ಣ ಪ್ರಜ್ಞೆಯೇ ಮತ್ತು ಅವರ ಭಾಷಾ ಪ್ರಜ್ಞೆಯ ಹಿಂದೆಯೂ ಕೆಲಸ ಮಾಡಿದೆ.

> "ಸಾಯುತಿದೆ ನಿಮ್ಮ ನುಡಿ ಮತ್ತು ಕನ್ನಡದ ಕಂದರರ
>
> ಹೊರ ನುಡಿಯ ಹೊರೆಯಿಂದ ಕುಸಿದು ಕುಗ್ಗಿ
>
> ರಾಜ ನುಡಿಯೊಂದೊಂದು ರಾಷ್ಟ್ರ ನುಡಿಯೆಂದೊಂದು
>
> ದೇವ ನುಡಿಯೆಂದೊಂದು ಹತ್ತಿ ಜಗ್ಗಿ".

ಕನ್ನಡ ಸಂರಕ್ಷಣೆಯ ಹೋರಾಟದಲ್ಲಿ ಸಂಸ್ಕೃತ ಹಾಗೂ ಹಿಂದಿ ಭಾಷೆಗಳ ಅಪಾಯದ ಬಗ್ಗೆ ಎಚ್ಚರಾಗುತ್ತಾರೆ, ಎಚ್ಚರಗೊಳಿಸುತ್ತಾರೆ. ಅವರ ಸಾಮಾಜಿಕ ಸಾಂಸ್ಕೃತಿಕ ಭಾಷಾ ನೀತಿಗಳಲ್ಲಿ ಒಂದು ಏಕ ಸೂತ್ರವಿದೆ, ಪರ ಭಾಷೆಯ ಮೋಹಕ್ಕೆ ಒಳಗಾಗಿರುವವರನ್ನು ಎಚ್ಚರಿಸುತ್ತ ಅವುಗಳ ಕೊರಳಿಗೆ ಖಡ್ಗವಾಗುವ ನಯ ವಂಚಕತನವನ್ನು ಹೇಳುತ್ತಾರೆ.

ಗಾಂಧೀಜಿಯವರ ಮುಂದಾಳತ್ವದಲ್ಲಿ ರಾಷ್ಟ್ರೀಯ ಸ್ವತಂತ್ರ ಚಳುವಳಿ ದೇಶಾದ್ಯಂತ ಕ್ರಿಯಾಶೀಲವಾಗಿತ್ತು, ಪ್ರಭುತ್ವ ವಿರೋಧಿಯಾಗಿದ್ದ ಕುವೆಂಪು ಈ ರಾಷ್ಟ್ರೀಯ ಚಳುವಳಿಯಲ್ಲಿ ನೇರವಾಗಿ ಪಾಲ್ಗೊಳ್ಳದಿದ್ದರೂ, ಅಂದಿನ ಹೋರಾಟಕ್ಕೆ ಸ್ಫೂರ್ತಿ ನೀಡುವ ಅನೇಕ ಕವಿತೆಗಳನ್ನು ಬರೆಯುವ ಮೂಲಕ ಚಳುವಳಿಯ ಧ್ವನಿಯಾಗಿದ್ದಾರೆ. ಪಾಂಚಜನ್ಯ (೧೯೩೩) ಕವನ ಸಂಕಲನದ ಹಲವು ಕವನಗಳು ಅಂದಿನ ಸ್ವಾತಂತ್ರ್ಯ ಯೋಧರಿಗೆ ಕ್ರಾಂತಿ ಮಂತ್ರಗಳಂತೆ ವರ್ತಿಸಿದವೆಂದು ಹೇಳಬಹುದು. ಯುಗ ಪರಿರ್ತನೆಗೆ ಯುವ ಜನಾಂಗವನ್ನು ಅಣಿಗೊಳಿಸಬೇಕಾದ ಅಗತ್ಯದಿಂದ ಹುಟ್ಟಿದ ಅವರ ಹಲವು ಕವಿತೆಗಳು ಯುದ್ಧೋತ್ಸಾಹದಿಂದ ಹಿಡಿದು ಬಂಧ ಮುಕ್ತಿಯ ಬಗ್ಗೆ ತೀವ್ರವಾದ ಚಿಂತನೆಯಿಂದ ಕೂಡಿರುತ್ತಿದ್ದವು.

"ನಡೆ ಮುಂದೆ ನಡೆ ಮುಂದೆ

ನುಗ್ಗಿನಡೆ ಮುಂದೆ!

ಜಗ್ಗದೆಯೆ, ಕುಗ್ಗದಯೆ

ಹಿಗ್ಗಿ ನಡೆ ಮುಂದೆ"

ಎಂದು ವೀರತೆಯ ದೀಕ್ಷೆ ಕೊಡುವ ಕವಿ

"ನಾನಳಿವೆ ನೀನಳಿವೆ

ನಮ್ಮೆಲುಬುಗಳ ಮೇಲೆ

ಮೂಡುವುದು ಮೂಡುವುದು

ನವ ಭಾರತದ ಲೀಲೆ"

ಎಂದು ದೇಶದ ಹಿತಕ್ಕಾಗಿ ಪ್ರಾಣಾರ್ಪಣೆಗೆ ಹೆಮ್ಮೆಯಿಂದ ಸಿದ್ಧರಾಗುತ್ತಾರೆ. ಭಾರತವನ್ನು ಬಂಧಿಸಿದ್ದ ಬ್ರಿಟಿಷರ ವಜ್ರ ಸಂಕೋಲೆಯನ್ನು ಕಳಚುವುದೇ ತಮ್ಮ ಧ್ಯೇಯೋದ್ದೇಶವೆಂಬಂತೆ ವೀರ ಪ್ರತಿಜ್ಞೆಯ ದೀಪ್ತ ಸಂದೇಶಗಳಾಗಿ ಇಲ್ಲಿಯ ಕವಿತೆಗಳು ಮೂಡಿ ಬಂದಿದೆ.

'ದೇವರು' ಕವಿತೆಯು ಭಾಷಿಕ ಪ್ರಾದೇಶಿಕತೆ ವಿಘಟನೆಯನ್ನು 'ಭಾರತೀಯತ್ವ'ದ ನೆಲೆಯಲ್ಲಿ ಒಗ್ಗೂಡಿಸುವ ಪ್ರಯತ್ನವಾಗಿದೆ.

"ನೂರು ದೇವರುಗಳನೆಲ್ಲ ನೂಕಾಚೆ ದೂರ

ಭಾರತಾಂಬೆ ದೇವಿ ನಮಗಿಂದು ಪೂಜಿಸುವ ಬಾರ"

ಅನಾದಿ ಕಾಲದಿಂದಲೂ ಭಕ್ತಿಯೆಂಬ ರಕ್ತವನ್ನು ಹೀರಿ ಕೊಬ್ಬಿರುವ, ನಿದ್ದೆ ಹೋಗಿರುವ ಬದುಕಿಯೂ ಸತ್ತಂತಿರುವ ಭಾರತೀಯ ದೇವತೆಗಳನ್ನು ನಂಬಿ ಫಲವಿಲ್ಲ ಇನ್ನು ಮುಂದೆ ಭಾರತಾಂಬೆಯನ್ನು ಆರಾಧಿಸೋಣ ಎನ್ನುತ್ತಾರೆ. ಮಾಡುವ ಕೆಲಸ, ಪಡುವ ಪಾಡು ಎಲ್ಲವೂ ಆಕೆಗಾಗಿ ಬೇರೆ ದೇವತೆಗಳನ್ನು ನಿರಾಕರಿಸಿದ ಕವಿ ನಮ್ಮನ್ನೇ ದೇವತೆಗಳೆಂದು ನಾವಿರುವ ಭಾರತವೇ ಸ್ವರ್ಗವೆಂದು ಕರೆದಿದ್ದಾರೆ.

ಸ್ವಾತಂತ್ರ್ಯದ ಸ್ವರ್ಗಕ್ಕೆ ಹೋರಾಡಿ ಎಂದು ಕರೆ ಕೊಡುತ್ತಾ, ಮೈ ರಕ್ತ ಹೋದರೂ ತಲೆಯೇ ಹಾರಿ ಹೋದರೂ ದೇಶ ಪ್ರೇಮದ ಆವೇಶದಲ್ಲಿ ಕೆಟ್ಟ ವೈರಿಗಳನ್ನು ನಾಶ ಮಾಡಿ ಎನ್ನುತ್ತಾರೆ. ಹೋರಾಟದ ತುರ್ತನ್ನು ಮನಗಾಣಿಸುತ್ತ " ತಡ ಮಾಡಿದರಮ್ಮಾನ ನೀಂ ಕೊಂದೆ" ಎಂದು ಇಂದೇ ಮುಹೂರ್ತವನ್ನು ನಿಗಧಿಗೊಳಿಸುತ್ತಾರೆ. ಏಕೆಂದರೆ ಅವರಿಗೆ ಭಾರತೀಯರ ಜಡ ಪ್ರಕೃತಿಯ ಅರಿವಿದೆ. ಇಲ್ಲಿನ ಆವೇಶ ದೇಶಾಭಿಮಾನವನ್ನು ಉದ್ದೀಪಿಸುವಲ್ಲಿ ಮಹತ್ತರವಾಗಿದೆ. ತಮ್ಮ ಪೊರೆವ ಭಾರತಾಂಬೆಯ ಮಡಿಲಿಗೆ ಜೀವವಿರಿಸಿ ಗುಡಿ ಕಟ್ಟುವುದು. ಬರಿಯ ಅಭಿಮಾನದ ಮಾತಾಗಿರದೆ. ಅಂತರ್ಯದ ನಿಷ್ಠೆಯಾಗಿಯೂ ಸತ್ಯ" ಇಂತ ಜನನಿಯ ಸೇವೆಯನ್ನು ಮೌನದಿಂದ ಮಾಡುತ್ತಿರುವವನು 'ಕಲಿಯುಗದ ಪ್ರಚ್ಛನ್ನ ಕಲ್ಕಿ ಸತ್ಯಾಗ್ರಹಿಯಾಗಿ ಗುರುತಿಸಿಕೊಳ್ಳುತ್ತಾನೆ' ' ಎಂಬುದು ಕವಿಯ ಇಂಗಿತ. "ಭಾರತ ಮಾತೆ ಕವಿತೆಯಲ್ಲಿ ಭಾರತ ಮಾತೆ ತನ್ನ ಬಂಧನದ ಬಗ್ಗೆ ಹೇಳಿಕೊಂಡಂತೆ ಇಲ್ಲಿ ಕನ್ನಡಮ್ಮನ ಮೊರೆ ಇದೆ. ತಾಯ್ನಾಡಿಗೆ ದುಡಿದು ಮಡಿದರೆ ಮುಕ್ತಿಯೆಂಬ ಸದಾಸೆಯನ್ನು ಬಿತ್ತುತ್ತಾಳೆ, ದಮ್ಮಯ್ಯ ಎಂದು ಅಂಗಲಾಚುತ್ತಾಳೆ"

"ಹೋರಾಡು ಕನ್ನಡಕೆ ಕಲಿಯಾಗಿ ರನ್ನಾ"

ಎಂದು ತನ್ನ ಮಕ್ಕಳನ್ನು ಓಲೈಸುತ್ತಾಳೆ, ಇದು ಕವಿಯ ಓಲೈಕೆಯೂ ಹೌದು.

ಶಿಲಾಭೇರಿ ಕವನದಲ್ಲಿ ಕಿವುಡಾದ ನಾಡಿನ ಜನರಿಗೆ ತ್ಯಾಗ, ಬಲಿದಾನ, ಸಾಹಸಗಳ ಸಾಂಸ್ಕೃತಿಕ ಶ್ರೇಷ್ಟತೆಯನ್ನು ತನ್ನಲ್ಲಿ ಹಿಡಿದಿಟ್ಟುಕೊಂಡಿರುವ ಶಿಲಾನ್ಯಾಸಗಳ ಭೇರಿಯಿಂದ ತಿವಿದು ಎಚ್ಚರಿಸುತ್ತಾರೆ. ಚೈತನ್ಯದ ಮರುಹುಟ್ಟಿಗೆ ಪರಂಪರೆಯ ಸಂಜೀವಿಯನ್ನು ಹೊತ್ತು ತರುತ್ತಾರೆ. 'ರಕ್ತ ತರ್ಪಣ' ಕವನದಲ್ಲಿ ಹುತಾತ್ಮ ಯೋಧರ ಆದರ್ಶ ಶೌರ್ಯವನ್ನು ಆತ್ಮೀಕರಿಸಿಕೊಂಡ ಇಂದಿನ ಯುವ ಪಡೆಯು ಆ ಮೂಲಕ ಅವರಿಗೆ ಆತ್ಮ ಶಾಂತಿ ಕೋರುವ 'ದೇಶ ಮಾತೆಯು ಹಡೆದ ವೀರಕಂದನಾಗುವ' 'ಜೋಳ ಪಾಳಿಯನ್ನು ಒತ್ತಿ ಹೇಳುತ್ತಾರೆ. ಭೂತಕಾಲದ ಗರ್ಭದ ಗೋರಿಯಿಂದ ಹುತಾತ್ಮರ ಕರೆಯನ್ನು ಆಲಿಸಿದ ಕವಿ ಅದನ್ನು ತಮ್ಮ ಸೋದರರಿಗೆ ಮುರ್ನುಡಿಯುತ್ತಾರೆ.

'ಸ್ವಾತಂತ್ರೋದಯ ಮಹಾ ಪ್ರಗಾಥದಲ್ಲಿ' ಭಾರತ ಸ್ವಾತಂತ್ರ್ಯ ಪ್ರಾಪ್ತಿಯ ಮಂಗಳ ಮುಹೂರ್ತವನ್ನು ಕುವೆಂಪು ರೋಮಾಂಚನಕಾರಿಯಾಗಿ ಹಿಡಿದಿಟ್ಟಿದ್ದಾರೆ. ೧೦ ಫಲಕಗಳ ಈ ಧೀರ್ಘ ಕವನದಲ್ಲಿ ಸ್ವಾತಂತ್ರ್ಯ ದೊರೆತರೂ ನಾಡು ಹರಿದು ಹಂಚಿ ಹೋಗಿರುವ ವ್ಯಥೆಯಿದೆ. ಕನ್ನಡ ಕಂದ ಮತ್ತು ದೇವಿಯ ಸಂಭಾಷಣೆಯಲ್ಲಿ ತಾಯಿಯ ವ್ಯೆಥೆಯನ್ನು ಅರಿವಿಗೆ ತಂದುಕೊಳ್ಳುವ ಕಂದ, ಐಕ್ಯತೆಗಾಗಿ ಹೋರಾಡಲು ಶಕ್ತಿಯನ್ನು ಕೊಡುವಂತೆ ದೇವಿಯಲ್ಲಿ ಬೇಡಿಕೊಳ್ಳುತ್ತಾನೆ.

ಕೋಟ್ಯಾಂತರ ಭಾರತೀಯರ ಮಹಾನ್ ಕನಸಿನ ಸ್ವಾತಂತ್ರ್ಯಕ್ಕೆ ಸಂಭ್ರಮಿಸುವ ಕವಿ ಇಡೀ ವಿಶ್ವವೇ ತನ್ನ ಆನಂದದಲ್ಲಿ ಪಾಲ್ಗೊಳ್ಳುವಂತೆ ಆಹ್ವಾನಿಸುತ್ತಾರೆ.

"ತುಹಿನಗಿರಿ ರಂಗದಲ್ಲಿ ದವಳಗಿರಿ ಶೃಂಗದಲಿ ಮುಗಿಲ ಸಿಂಹಾಸನೆ"

ಯಾದ ಸ್ವಾತಂತ್ರ್ಯ ಲಕ್ಷ್ಮಿಯ ಕಲ್ಪನೆಯ ಔನ್ನತ್ಯ ಮಹಾನ್ ಕವಿ ಪ್ರತಿಭೆಯ ದರ್ಶನವೇ ಹೌದು.

ಪರಕೀಯರ ಬಂಧನದಲ್ಲಿದ್ದಾಗಲೇ ಆಕೆ ಚಲುವೆಯಾಗಿದ್ದಳು ಎಂದು ವ್ಯಥೆ ಪಡುತ್ತಾರೆ. ಧೀರರಿಗೆ ಆಕೆ ಸರ್ವಮಂಗಳೆ, ಭದ್ರೆ, ಶಿವೆ, ಲಕ್ಷ್ಮಿಯಾದರೆ, ಹೆಂಬೇಡಿಗಳಿಗೆ ಮಾರಿಯಂತೆ. ಚಂಡಿಯೋಪಾದಿಯಲ್ಲಿ ಇದ್ದಾಳೆ.

"ಕುವೆಂಪು ಅವರಿಗೆ ರಾಷ್ಟ್ರೀಯತೆ ಎನ್ನುವುದು ಇವರ ತಲೆಮಾರಿನ ಬೇರಲ್ಲಿ ಲೇಖಕರ ಪರಿಭಾವನೆಗಿಂತ ಹೆಚ್ಚು ಸಂಕೀರ್ಣವಾದುದಾಗಿತ್ತು. ಅದು ಕೇವಲ ಸ್ವಾತಂತ್ರ್ಯ ಹೋರಾಟದಲ್ಲಿ

ಅವನ್ನು ವಸ್ತುವಾಗಿಸಿಕೊಂಡ ಸಾಹಿತ್ಯಕ್ಕಲ್ಲ. ಶಕ್ತಿಯುತ, ಸ್ಫೂರ್ತಿಯುತ ದೇಶಭಕ್ತಿ ಗೀತೆಗಳಲ್ಲಿ ಒಮ್ಮೆಗೇ ಅದು ಆಧ್ಯಾತ್ಮಿಕ ತತ್ವವೂ ಲೌಕಿಕ ತತ್ವವೂ ಆಗಿತ್ತು."[೫]

ಜೊತೆಗೆ ಕುವೆಂಪು ಅವರಿಗೆ ರಾಷ್ಟ್ರೀಯತೆಯು ಒಂದು ಒಟ್ಟಾರೆ ಬಿಡುಗಡೆಯ ತುರ್ತು ಆಗಿತ್ತು. ಆ ಕಾರಣದಿಂದಲೇ ನೂರು ದೇವರುಗಳನ್ನು ಆಚೆ ನೂಕುವ ಆಧ್ಯಾತ್ಮ ವಿಮುಖತೆ "ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ" ಎಂದು ಲೌಕಿಕ ಸ್ತರಕ್ಕಿಳಿಯುವ ದ್ವಂದ್ವವನ್ನು ಅನುಭವಿಸುತ್ತಾರೆ.

"ಸತ್ತ ಕಲ್ಗಳ ಮುಂದೆ ಅತ್ತು ಕರೆದರೆ ಸಾಕು

ಜೀವಧಾರೆಯೆನಿಂದು ಕೂಗಬೇಕು"

ಎಂಬ ಇದೇ ಪದ್ಯದ ಮುಂದಿನ ಸಾಲುಗಳ ಭಾರತಾಂಬೆ ಕುವೆಂಪು ಅವರಿಗೆ ವಿಶಾಲತೆ, ಉದಾರತೆ ಹಾಗೂ ಸಮಾನತೆಗಳನ್ನೊಳಗೊಂಡ ಬಿಡುಗಡೆಯ ಸಂಕೇತವಾಗಿದ್ದಾಳೆಂಬುದನ್ನು ಸೂಚಿಸುತ್ತವೆ. ಕುವೆಂಪು ಈ ಸಂದರ್ಭದಲ್ಲಿ ವಿಶಿಷ್ಟವಾಗುವುದು ಸ್ವಾತಂತ್ರ್ಯ ನಂತರವೂ ಈ ಸಂಕೇತಾರ್ಥ ಅವರಲ್ಲಿ ಬಿಡಲಾಗಲಿಲ್ಲ ಎಂಬ ಕಾರಣಕ್ಕಾಗಿ ಇತರೆ ಪ್ರಮುಖ ಲೇಖಕರಂತೆ ಸ್ವಾತಂತ್ರ್ಯ ನಂತರದ ವಿಚ್ಛೇಧಿತಗಳಿಗೆ ರೋಷಗೊಳ್ಳದ ಕುವೆಂಪು ಸಂಪೂರ್ಣ ಸ್ವಾತಂತ್ರ್ಯ ಸಾಧನೆ ಕಾಲ ಕ್ರಮೇಣ ಹಂತ ಹಂತವಾಗಿ ಆಧ್ಯಾತ್ಮಿಕ ಸಿದ್ಧಿಯಂತೆ ಆಗಬೇಕಾದದ್ದು ಎಂಬ ಅರಿವಿನೊಂದಿಗೆ ಬದುಕಿ ಬರೆದರು. ಅದು ದಾಸನು ಈಶನಾಗುವ ಆಧ್ಯಾತ್ಮಿಕ ಸ್ವಾತಂತ್ರ್ಯ ಕುವೆಂಪು ಅವರಿಗೆ ರಾಷ್ಟ್ರೀಯ ಸ್ವಾತಂತ್ರ್ಯವೆನ್ನುವುದು ವೈಯುಕ್ತಿಕ ವಿಕಾಸದ ನೆಲೆಯಲ್ಲಿ ಒಂದು ಪ್ರಾಥಮಿಕ ಹಾಗೂ ಅನಿವಾರ್ಯ ಹಂತ ಮಾತ್ರವಾಗಿತ್ತು. ಇದು ಲೌಕಿಕಾರ್ಥವನ್ನು ಮೀರದ ಕಲ್ಪನೆ ಆಗುವಿಕೆಯ ಕಡೆಗೆ ವ್ಯಕ್ತವಾಗುವ ವಿವಿಧ ರೀತಿಯ ತುಡಿತ ಈ ತುಡಿತಕ್ಕೆ ರಾಷ್ಟ್ರೀಯ ಸ್ವಾತಂತ್ರ್ಯ ಎನ್ನುವುದು ಕಾಲಧರ್ಮೀಯವಾದ ಒಂದು ನೆಪವಷ್ಟೇ.

"ಅನಿಕೇತನ" ಕವಿತೆಯಲ್ಲಿ ವಿಶ್ವಮಾನವ ಸಂದೇಶದ ಮೂಲಕ ಅತ್ಯಂತಿಕ ಸ್ವಾತಂತ್ರ್ಯವನ್ನು ಘೋಷಿಸುತ್ತಾರೆ". ಕುವೆಂಪು ಅವರಿಗೆ ಸ್ವಾತಂತ್ರ್ಯವೆಂಬುದು ನಿಜಾರ್ಥದಲ್ಲಿ ಅವಿಭಾಜ್ಯವೂ ಅಖಂಡವೂ ಆಗಿದ್ದುದರಿಂದ ಸ್ವಾತಂತ್ರ್ಯ ಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಸನ್ನಿವೇಶಗಳೆರಡರಲ್ಲೂ ಕುವೆಂಪು ಪ್ರತಿಕ್ರಿಯಿಸಿದ್ದು, ಚೇತನಾರೋಹಣ ನೆಲೆಯಲ್ಲಿ".[೬]

ಗಣರಾಜ್ಯವೆಂದರೆ ಸಾಮಾನ್ಯರ ಪೂಜೆ ಎಂಬ ಅವರ ಕಾಣ್ಕೆ, ಸ್ವಾತಂತ್ರ್ಯ ಪ್ರಜಾ ಪ್ರಭುತ್ವ ಹಾಗೂ ಗಣರಾಜ್ಯದ ಕಲ್ಪನೆಗಳನ್ನು ಅವರು ಎಷ್ಟು ಮೂಲಭೂತವಾಗಿ ಗ್ರಹಿಸಿದ್ದರು ಎಂಬ ಸೂಚನೆ ನೀಡುತ್ತದೆ.

ಆಡಳಿತ ಮತ್ತು ಶಿಕ್ಷಣದ ಭಾಷೆಯಾಗಿ ಕನ್ನಡ, ಅಖಂಡ ಕರ್ನಾಟಕ ಜಾತಿ ನಿರ್ಮೂಲನ ಇವು ಅವರು ಬದುಕನ್ನು ಸಕಲವೂ ಪರಿಪೂರ್ಣತೆಯೆಡೆಗೆ ವರಿಸಲಾಗುತ್ತದೆ ಎಂಬ ದೃಷ್ಟಿಯೊಡನೆ ಗ್ರಹಿಸುವ ಅವರ ಪೂರ್ಣ ದೃಷ್ಟಿಯ ಅವಿಭಾಜ್ಯ ಅಂಗಗಳೇ ಆಗಿದ್ದವು.

ಕನ್ನಡ ಭಾಷೆ, ನೆಲದ ಋಣದಲ್ಲಿದ್ದು ಅನ್ಯ ಭಾಷೆಯನ್ನು ಅಸ್ತಿತ್ವ ಮಾಡಿಕೊಳ್ಳುವ ಅತಿ ಸೂಕ್ಷ್ಮ ಶೋಷಣೆಯನ್ನು ವಿರೋಧಿಸುತ್ತಲೇ ಸ್ವಾತಂತ್ರ್ಯ ಪೂರ್ವದಲ್ಲಿಯೇ ಅಖಂಡ ಕರ್ನಾಟಕದಲ್ಲಿ ಸರ್ವ ರಂಗಗಳಲ್ಲಿ ಕನ್ನಡವೇ ರಾರಾಜಿಸುವ ನಾಡಗೀತೆಯನ್ನು ಬರೆಯುತ್ತಾರೆ.

ಕುವೆಂಪು ಸ್ವಾತಂತ್ರ್ಯ ಬಯಸಿದ್ದು, ಬ್ರಿಟಿಷರ ಆಳ್ವಿಕೆಯಿಂದ ಎನ್ನುವುದಕ್ಕಿಂತ ಹೆಚ್ಚಾಗಿ ಬ್ರಿಟಿಷರ ಆಳ್ವಿಕೆಗೆ ಕಾರಣವಾದ ಮತ, ಮೌಢ್ಯ, ಜಾತಿ ಪದ್ಧತಿ, ರಾಜಶಾಹಿ ಹಾಗೂ ಸಂಬಂಧಿತ ಮೂಢ ಆಚರಣೆಗಳಿಂದ ಕುವೆಂಪು ತಮ್ಮ ಸ್ವಾತಂತ್ರ್ಯ ಗೀತೆಗಳಲ್ಲಿ ಎಲ್ಲಿಯೂ ಬ್ರಿಟಿಷರನ್ನು ನಾಮಪದೀಯವಾಗಿ ದೂಷಿಸಲು ಹೋಗಿಲ್ಲ ಎಂಬುದು ಗಮನಾರ್ಹ.

ಇಂಗ್ಲೀಷನ್ನು ಬಲತ್ಕಾರವಾಗಿ ನಮ್ಮವರ ಮೇಲೆ ಹೇರುತ್ತಿರುವುದನ್ನು ವಿರೋಧಿಸುತ್ತಾರೆ. ಗಾಂಧಿ ಇಂಗ್ಲೀಷರ ದಾಸ್ಯದಿಂದ ನಮ್ಮನ್ನು ಪಾರು ಮಾಡಿದರೆ ಇಂದು ನಾವು ಅವರನ್ನು ಕೊಂದು ಇಂಗ್ಲೀಷಿಗೆ ದಾಸರಾಗಿದ್ದೇವೆ. ಇದು ಆಹಾರ ಸಮಸ್ಯೆ, ಚೀನಿಯರ ಸಮಸ್ಯೆಗಿಂತಲೂ ಗುರುತರವಾದ ಸಮಸ್ಯೆ. ಅದರೆ ಇದು ಅನ್ಯಭಾಷಾ ದ್ವೇಷದಿಂದ ಹೇಳಿದ ಮಾತಲ್ಲ. ಭಾಷೆ ಐಚ್ಛಿಕವಾಗಿರಲಿ ಎಂದು ಅದನ್ನು ಬಲತ್ಕಾರವಾಗಿ ಹೇರುವುದರ ವಿರುದ್ಧ ಕಿಡಿ ಕಾರಿದ್ದಾರೆ. ಬಲತ್ಕಾರದ ಇಂಗ್ಲೀಷಿನಿಂದ ಪರೀಕ್ಷೆಯ ಜಿಲೊಟಿನ್ನಿಗೆ ಕೋಟ್ಯಾಂತರ ಕನ್ನಡಿಗರ ಬಲಿಯಾಗುತ್ತಿದೆ. ಇಂಗ್ಲೀಷ್ ಭಾಷೆಯನ್ನು ಬಲತ್ಕಾರದ ಸ್ಥಾನದಿಂದ ಐಚ್ಛಿಕ ಸ್ಥಾನಕ್ಕೆ ನಿಯಂತ್ರಣಗೊಳಿಸಬೇಕೆನ್ನುತ್ತಾರೆ. ಭಾರತೀಯರೆ ಎಚ್ಚೆತ್ತುಕೊಂಡು ಅವರ ಸ್ವಾತಂತ್ರ್ಯವನ್ನು ಅವರೇ ಕಾಪಾಡಿಕೊಳ್ಳಬೇಕಾಗಿದೆ. ತ್ರಿಭಾಷಾ ಸೂತ್ರದ ಬಗ್ಗೆಯೂ ಕುವೆಂಪು ದನಿಯೆತ್ತಿದ್ದಾರೆ. ಈ ಸೂತ್ರ ಅನವಶ್ಯಕವಾದುದು. ಈ ತ್ರಿಭಾಷಾ ಸೂತ್ರ ತ್ರಿಶೂಲದಂತೆ ನಮ್ಮನ್ನು ತಿವಿಯುತ್ತದೆ. ಈ ಸೂತ್ರವೂ ನಮಗೆ ಬಲತ್ಕಾರದ್ದಾಗುತ್ತದೆ. ಇದರಲ್ಲಿ ಪ್ರಾಂತೀಯ ಭಾಷೆ ಸೇರದೆ ಹೋಗುವ ಅಪಾಯವುಂಟು. ಇಂಗ್ಲೀಷಿನಂತೆ ಹಿಂದಿಯೂ ಕಡ್ಡಾಯವಾದರೆ ನಮ್ಮ ಪ್ರಾಣ ಹೋಗುತ್ತದೆ. ಇದರಿಂದ ರಾಷ್ಟ್ರಾಘಾತವಾಗುತ್ತದೆ. ಜನರಿಗೆ ಮಾತೃ ಭಾಷೆಯೇ ಸಾಕು. ಬೇಕಾದವರು

ಇಂಗ್ಲೀಷನ್ನು ಕಲಿಯಲಿ ಎಂದು ಅದು ಅಂತರರಾಷ್ಟ್ರೀಯ ಕೀರ್ತಿ ಪಡೆದು ಘರ್ಜಿಸುವ ಹುಲಿಯಾದರೂ ಅದಕ್ಕೆ ಹೆದರದೆ ತಮ್ಮ ಭೋ ಪರಾಕನ್ನು ಕೂಗಿ ದಿಟ್ಟತನದಿಂದ ಎದುರಿಸಿದ್ದಾರೆ. ಕವಿಯನ್ನು ಅಜ್ಞಾತ, ಅಖ್ಯಾತ, ಅನಾಮಿಕ, ಇಲಿಯಂತೆ ಸಾಮಾನ್ಯ ಎಂದು ಅಪಹಾಸ್ಯ ಮಾಡಿದರೂ ಕನ್ನಡದ ಬೆನಕದೇರನ್ನೆಳೆವನೆಂಬ ಧನ್ಯತಾ ಭಾವವೇ ಅವರಿಗೆ ಸಾಕಾಗಿದೆ.

"ಕನ್ನಡದ ಬೆನಕದೇರನ್ನೆಳೆವ ಈ ಧನ್ಯತೆಯೇ ಸಾಕು."

ಇಲಿ ಚಿಕ್ಕ ಪ್ರಾಣಿಯಾದರೂ ದೇವಗಣ ನಾಯಕನೆನಿಸಿದ ಬೆನಕನನ್ನು ಎಳೆಯುವ ಸಾಮರ್ಥ್ಯವಿದೆ, ಹೆಮ್ಮೆಯಿದೆ. ಈ ಬಗ್ಗೆ ಅವರ ಅಭಿಪ್ರಾಯ ಹೀಗಿದೆ. ಇಂಗ್ಲೀಷ್ ಬಲಿಷ್ಠ ಭಾಷೆ ಅದರ ಕಾಲು ಮುರಿದು ಆಳಾಗಿರಿಸಿಕೊಳ್ಳಿ. ಹೇಳಿದ ಕೆಲಸ ಮಾಡಿಕೊಂಡು ಬಿದ್ದಿರುತ್ತದೆ. ಹಿಂದಿಗೆ ಸ್ವಾತಂತ್ರ್ಯ ಕೊಡುವುದು ಬೇಡ ಅದರ ಸೊಂಟ ಮುರಿಯಿರಿ ಅದರಿಂದ ನಮಗೆ ಅಪಾಯವಿಲ್ಲ. ಒಬ್ಬ ಕುಂಟ, ಒಬ್ಬ ಹೆಳವ ನಮ್ಮ ಮೈಮೇಲೆ ಬೀಳುವುದಿಲ್ಲ.

ಭಾರತ ಸ್ವಾತಂತ್ರ್ಯ ಪಡೆದರೂ ಹಲವು ಆಡಳಿತಗಳಲ್ಲಿ ಹರಿದು ಹಂಚಿ ಹೋಗಿದ್ದ ಕರ್ನಾಟಕ ರಾಜ್ಯದ ಐಕ್ಯತೆ ನಾಡಿನ ಜನರ ಮಂತ್ರವಾಗಿತ್ತು. ಅಖಂಡ ಕರ್ನಾಟಕ ಸ್ಥಾಪನೆಗೆ ಜನರನ್ನೆಲ್ಲಾ ಎಚ್ಚರಗೊಳಿಸಬೇಕು. ಅದಕ್ಕಾಗಿ ಕಂಕಣಬದ್ಧರಾಗಿ ಹೋರಾಡಬೇಕು. ಆದರೆ ಅದು ಕೂಗಾಟದ ರಾಜಕೀಯ ನಾಟಕವಲ್ಲ. ಅದೊಂದು ದೊಡ್ಡ ಕನಸು. ಆ ಕನಸು ನನಸಾಗುವ ಹಿಂದೆ ಕೋಟಿ ಕೋಟಿ ಜನರ ಮನಸ್ಸಿದೆ ಎಂದು ಸಾಮಾಜಿಕ ಪ್ರಜ್ಞೆಯನ್ನು ತೋರುತ್ತಾರೆ. ಕರ್ನಾಟಕ ಕೇವಲ ನಾಡಿನ ಹೆಸರಷ್ಟೇ ಅಲ್ಲ, ಅದು

"ಮಂತ್ರಕಣಾ! ಶಕ್ತಿ ಕಣಾ!

ತಾಯಿ ಕಣಾ! ದೇವಿ ಕಣಾ!

ಬೆಂಕಿ ಕಣಾ! ಸಿಡಿಲು ಕಣಾ!

ಕಾವ ಕೊಲುವ ಒಲವ ಬಲವ

ಪಡೆದ ಚಲದ ಚಂಡಿ ಕಣಾ

ಋಷಿಯ ಕಾಣ್ಬ ಕಣ್ಣಿಗೆ!"

ಆಕೆ ಮಮತಾಮಯಿಯಾಗಿರುವಂತೆ, ಜ್ವಾಲಮಾಲಿನಿಯೂ ಹೌದು. ನಾಡಿಗಾಗಿ ನುಡಿಗಾಗಿ ದುಡಿಯುವವರನ್ನು ಕಾಯುತ್ತಾಳೆ ಹಾಗೆಯೇ ದೇಶ ದ್ರೋಹಿಗಳನ್ನು ಪಾತಕಿಗಳನ್ನು ಕೊಲ್ಲುತ್ತಾಳೆ. ಕಣಾ! ಎಂಬ ಸಂಬೋಧನ ಪದವು ಆತ್ಮಸ್ಥೈರ್ಯವನ್ನು ಅತ್ಯಭಿಮಾನವನ್ನು ತಿಳಿಸುತ್ತದೆ.

"ಕನ್ನಡ ನಾಡು ಒಂದಾಗಬೇಕೆಂದು ಹಂಬಲಿಸುವ ಕನ್ನಡ ಮಕ್ಕಳೆಲ್ಲ ಒಂದು ಮಹಾದಿನ ಶುಭ ಮುಹೂರ್ತದಲ್ಲಿ ತಮ್ಮ ಊರಿನ ಹೊಳೆಗೂ ಕೆರೆಗೂ ಗುಂಪಾಗಿ ನಡೆದು ಮಿಂದು ಮಡಿಯುಟ್ಟು ದೇವರಿಗೆ ಬಾಗಿ ಕನ್ನಡದ ದೀಕ್ಷೆ ಕೈಗೊಳ್ಳುತ್ತಾರೆ. ಕನ್ನಡ ನಾಡಿಗಾಗಿ ಕನ್ನಡಿಗರೆಲ್ಲ ಒಂದಾಗಬೇಕು." ಆಗ ಕನ್ನಡ ನಾಡು ಒಂದಾಗುತ್ತದೆ ಎಂದು ಒಗ್ಗಟ್ಟಿನ ಮಹತ್ವವನ್ನು ಸಾರುತ್ತಾರೆ.

ಕನ್ನಡಿಗರನ್ನು ಕನ್ನಡದ ತಾಯಿ ಕೇಳಿಕೊಳ್ಳುವಂತೆ ಕನ್ನಡದ ಕಂದನಾದ ಕವಿ ಕನ್ನಡಮ್ಮನನ್ನು ಕೈಹಿಡಿದು ಕಾಪಾಡುವಂತೆ ನಿವೇದಿಸಿಕೊಳ್ಳುತ್ತಾನೆ.

"ಕನ್ನಡ ಕಂದನಿವನು ಕೈಬಿಡದಿರಮ್ಮಾ

ನೊಂದು ಬಂದಿಹನು ಹಾಲೂಡಿ ಪೊರೆಯಮ್ಮ."

ಕನ್ನಡನಾಡು ಚೆಲುವಾದದ್ದು ಅಲ್ಲಿಯ ನದಿಗಳು, ವರ್ಣಶಿಲ್ಪ ಎಲ್ಲವೂ ಸುಂದರ ರಮಣೀಯವಾದವು. ನವಕವಿಯ

"ನವರಸ ನವೀನ ಶೃತಿಯಂತೆ,

ದಿವ್ಯ ವೀಣಾ ಗಾನ ಗತಿಯಂತೆ"

ಏಕೈಕ ಕರ್ನಾಟಕ ಮೂಡುತಿದೆ. ದೀರ್ಘ ಹೋರಾಟದ ಕನ್ನಡಿಗರ ಏಕೀಕರಣ ಚಳುವಳಿಗೆ ನವೆಂಬರ್ ೧, ೧೯೫೬ ರಲ್ಲಿ ಫಲ ದೊರೆತು ಬಹುದಿನಗಳ ಬಹುಜನರ ಕನಸು ನನಸಾದ ಅವಿಸ್ಮರಣೀಯ ಕ್ಷಣದಲ್ಲಿ ಭಾರತ ಮಾತೆಯನ್ನು ಮಗಳಾದ ಕನ್ನಡಮ್ಮನನ್ನು ಹರಸಲು ಬಾ ಎಂದು ಆಹ್ವಾನಿಸುತ್ತಾರೆ.

ದೇಶ ಸ್ವತಂತ್ರವಾಗಿದ್ದರೂ ಕನ್ನಡ ತಾಯಿಗೆ ಏಕೀಕರಣವಾಗದೆ ಆ ಸ್ವಾತಂತ್ರ್ಯ ಲಭಿಸಿರಲಿಲ್ಲ. ಭಾರತಾಂಬೆ ಸ್ವತಂತ್ರಳಾದ ೯ ವರ್ಷಗಳ ನಂತರ ಕನ್ನಡಾಂಬೆ ಬಂಧಮುಕ್ತಳಾಗಿದ್ದಾಳೆ. ಹೀಗೆ ಮಗಳ ಅಭ್ಯುದಯವಾದಾಗ ಮಾತ್ರ ತಾಯಿಯ ಅಭ್ಯುದಯ ಸಾಧ್ಯ. ಈ ರಾಜ್ಯೋದಯವಾಗಿ ಶಾಂತಿ ನೆಲೆಸಿದೆ.

ಕನ್ನಡದ ಬಗೆಗೆ ಮುಗ್ಧತೆಯೇ ಮೈವೆತ್ತಂತಿದೆ ಅವರ ಕನ್ನಡ ಎನ್ ಕುಣಿದಾಡುವುದೆನ್ನದೆ ಎಂದು ಆರಂಭವಾಗುವ ಕನ್ನಡ ಎಂಬ ಕವನ.

"ಕನ್ನಡ ಎನೆ ಕುಣಿದಾಡುವುದೆನ್ನದೆ.

ಕನ್ನಡ ಎನ್ ಕಿವಿ ನಿಮಿರುವುದು

ಕಾಮನಬಿಲ್ಲನು ಕಾಣುವ ಕವಿಯೊಲು

ತೆಕ್ಕನೆ ಮನ ಮೈ ಮರೆಯುವುದು"

ಇಲ್ಲಿ ಕವಿಯು ಸಂತೋಷದಿಂದ ತನ್ನನ್ನೆ ಮರೆತರು ಆ ಮರೆವು ಜಡತ್ವಕ್ಕೆ ಎಳೆಸುವ ಅಪಾಯದ ಅರಿವನ್ನು ಉಳ್ಳವರಾಗಿ ಕನ್ನಡ ಡಿಂಡಿಮವನ್ನು ಬಾರಿಸುತ್ತಾರೆ.

"ಬಾರಿಸು ಕನ್ನಡ ಡಿಂಡಿಮವ

ಓ ಕರ್ನಾಟಕ ಹೃದಯಶಿವ

ಸತ್ತಂತಿಹರನು ಬಡಿದೆಚ್ಚರಿಸು

ಕಚ್ಚಾಡುವರನು ಕೂಡಿಸಿ ಒಲಿಸು

ಹೊಟ್ಟೆಯ ಕಿಚ್ಚಿಗೆ ತಣ್ಣೀರ್ ಸುರಿಸು

ಒಟ್ಟಿಗೆ ಬಾಳುವ ತೆರದಲಿ ಹರಸು"

ಎಂಬ ಕವಿ ಮಾತು ಕನ್ನಡಿಗರ ಸಾರ್ವಕಾಲಿಕ ಭಿನ್ನಹವಾಗಬೇಕಾದ ಅಗತ್ಯವಿದೆ.

"ಕನ್ನಡಕ್ಕಾಗಿ ಕೈಯೆತ್ತು; ನಿನ್ನ ಕೈ ಕಲ್ಪವೃಕ್ಷವಾಗುತ್ತದೆ. ಕನ್ನಡಕ್ಕಾಗಿ ಕೊರಳೆತ್ತು; ಅಲ್ಲಿ ಪಾಂಚಜನ್ಯ ಮೂಡುತ್ತದೆ. ಕನ್ನಡಕ್ಕಾಗಿ ಕಿರುಬೆರಳೆತ್ತಿದರೂ ಸಾಕು ಅದೇ ಗೋವರ್ಧನ ಗಿರಿಯಾಗುತ್ತದೆ" (ಕನ್ನಡ ಡಿಂಡಿಮ) ಎಂದು ಹೇಳಿದ್ದಾರೆ ಅಂತೆಯೇ ಬದುಕಿದ್ದಾರೆ.

ಭಾರತೀಯ ರಾಜಕೀಯವನ್ನು ಸುವ್ಯವಸ್ಥಿತಗೊಳಿಸಿ ಶೂದ್ರ ಜನಾಂಗವನ್ನು ಸಮಾಜದ ಮೌಲಿಕ ನೆಲೆಗೆ ತರುವಲ್ಲಿ ಬ್ರಿಟಿಷರನ್ನು ಮೆಚ್ಚುಗೆಯಿಂದ ಒಪ್ಪಿಕೊಳ್ಳುತ್ತಾರೆ. ಜಡತೆಯ ವಿರುದ್ಧ ಅವರೆಲ್ಲ ಬಂಡೂ ಆತ್ಯಂತಿಕವಾಗಿ ಅದರ ಪೂರ್ಣಾವತಾರದಲ್ಲಿ ಕರ್ನಾಟಕದ ಚೇತನದ

ಉನ್ನತೀಕರಣವನ್ನೇ ಉದ್ದೇಶವಾಗಿಟ್ಟುಕೊಂಡಿರುತ್ತಿತ್ತು. ಸ್ವಾತಂತ್ರ್ಯ ಹೋರಾಟದ ಸಂದರ್ಭದ ಅವರ ಧೋರಣೆಗಳು ತೀವ್ರವಾದಿಯವೇ ಹೊರತು ಗೋಖಲೆ ಮುಂತಾದ ಸುಧಾರಣಾವಾದಿಗಳದಲ್ಲ ನಂತರ ಗಾಂಧಿಯವರ ಪ್ರಭಾವಕ್ಕೆ ಗುರಿಯಾದರೂ ಅವರ ಮೂಲನೆಲೆ ಆವೇಶದ್ದು.

---

೨. ಮಂಗಳ.ಚಿ.ನ. ರಾಷ್ಟ್ರೀಯತೆ ಮತ್ತು ಕುವೆಂಪು.

೩. ಕುವೆಂಪು ಅವರ ವೈಚಾರಿಕತೆ ಕೆಲವು ಟಿಪ್ಪಣಿಗಳು– ಕಿಕ್ಕೇರಿ ನಾರಾಯಣ.

೪. ೧೩೭ ಪು ಏಕೀಕರಣ ಹಾಗೂ ಆಧುನಿಕ ಕನ್ನಡ ಕಾವ್ಯ ಡಾ॥ ಆರ್. ಗೋವಿಂದ ರಾಜು

೫. ಕುವೆಂಪು ಸ್ವಾತಂತ್ರ್ಯೋತ್ತರ ಸನ್ನಿವೇಶದಲ್ಲಿ ಟಿ.ಎಸ್. ನಾಗಭೂಷಣ್).

೬. ಅದೇ

## ಅಧ್ಯಾಯ ೫

## ಬೇಂದ್ರೆ ನಾಡು ನುಡಿ ಚಿಂತನೆ

ಆಧುನಿಕ ಕನ್ನಡ ಕಾವ್ಯ ಪರಂಪರೆಯಲ್ಲಿ ತಮ್ಮ ಭಾಷಿಕ ಮತ್ತು ಸಾಹಿತ್ಯಕ ಚಟುವಟಿಕೆಗಳ ಮೂಲಕ ಕನ್ನಡ ನಾಡನ್ನು ಕಟ್ಟುವ ಸಾಹಸದಲ್ಲಿ ಗೆಳೆಯರ ಗುಂಪಿನ ಹಾಗೂ ಬೇಂದ್ರೆಯವರ ವಿಶೇಷ ಶ್ರಮವಿದೆ.

ಬೇಂದ್ರೆ ತಮ್ಮ ಕಾವ್ಯದ ಮೋಡಿಯ ಮೂಲಕ ತಾವು ಇದ್ದ ನೆಲದ ಬಗ್ಗೆ ಅರಿಯುವ ಹಾಗು ಕನ್ನಡಿಗರಿಗೆ ಮನವರಿಕೆ ಮಾಡಿಕೊಡುವ ದಾಟಿ ವಿಶೇಷ ರೀತಿಯದು.

ಧಾರವಾಡ ಅವರಿಗೆ 'ಇದುವೆ ಮೀಸಲಿಟ್ಟ ನಾಡು' ಅಲ್ಲದೆ ಅದು ಕನ್ನಡ ನಾಡಿನ ಸೆರಗು ಅದಕ್ಕೆ ಕವಿ "ತಾಯಿ, ನಿನ್ನ ಮೇಲು ಸೆರಗು" ಎಂದು ಒತ್ತಿ ಹೇಳುತ್ತಾರೆ ತಾವು ವಾಸಿಸುವ ಊರಿನ ಮೂಲಕ ಕನ್ನಡ ನಾಡನ್ನು ನೋಡುವ, ಗುರುತಿಸುವ ನೋಟ ಅಭಿಮಾನಕ್ಕೆ ಪ್ರೇರಕವಾಗಿ ಸಜ್ಜುಗೊಳಿಸುವುದನ್ನು ಹೇಳುವಂಥದ್ದು.

ತಮ್ಮ ಸರಳ ಸಹಜ ಭಾಷಿಕ ಅಭಿವ್ಯಕ್ತಿಯಲ್ಲಿ ವಿಚಾರಗಳನ್ನು ಜನರ ಮಧ್ಯೆ ನಿಲ್ಲಿಸಿದ ವಚನಕಾರರ ಪರಿಶ್ರಮವನ್ನು ಬೇಂದ್ರೆ "ಶರಣನಾಡ"ನ್ನಾಗಿ ಅಭಿಮಾನಿಸುತ್ತಾರೆ. ಒಂದು ನಾಡನ್ನು ಅಲ್ಲಿನ ಜನರ ಸಾಮಾಜಿಕ ಧಾರ್ಮಿಕ ಭಾವನೆಗಳೆರಡರಲ್ಲೂ ಅರ್ಥ ಮಾಡಿಸುವ ರೀತಿ ಹೊಸತನದ್ದು ಅಂದರೆ ಇಲ್ಲಿ ಶೈವ, ವೈಷ್ಣವ ವಿಚಾರಧಾರೆಗಳ ಜೊತೆಗೆ ಕನ್ನಡ ನಾಡಿನ ಬಗ್ಗೆ ಪ್ರೀತಿ ಉತ್ಕಟ ಭಾವಗಳನ್ನು ಉಂಟುಮಾಡುವ ಆಶಯವಿದೆ.

ಕನ್ನಡಿಗರಿಗೆ ತಮ್ಮ ವೈಭವಯುತ ದಿನಗಳನ್ನು ನೆನಪು ಮಾಡಿಕೊಡುವುದರ ಮೂಲಕ ಸಮಕಾಲೀನ ಸ್ಥಿತಿ-ಗತಿಗಳನ್ನು ಅರಿವಿಗೆ ತಂದುಕೊಡುವ ಆಶಯ ಬೇಂದ್ರೆ ಕಾವ್ಯದಲ್ಲಿ ಉತ್ಕಟವಾಗಿದೆ.

ವಸಾಹತುಶಾಹಿ ಆಡಳಿತ ವಿರೋಧಿಯಾದ ಪ್ರಮುಖ ಪರಿಕಲ್ಪನೆಯಾಗಿ ಬೆಳೆದ 'ಹಂಪೆ'ಯ ವೈಭವವನ್ನು ಕೇಂದ್ರ ವಸ್ತುವನ್ನಾಗಿ ಮಾಡಿಕೊಂಡ "ಹಂಪೀ-ವಿಜಯನಗರ ದರ್ಶನ" ಕವಿತೆಯಲ್ಲಿ ಅದನ್ನು ನಾಡಿನ ನಡುಮನೆ ಎಂದು ಗುರುತಿಸುತ್ತಾರೆ.

ಬಿದ್ದ ರಾಜ್ಯವಲ್ಲ ಉದ್ಬುದ್ಧವಾಗಿದ್ದು,

ಎದ್ದ ರಾಜ್ಯದ ಮೊಳಕೆಯಿದು ........... ಎನ್ನುತ್ತಾರೆ.

ಒಡೆದ ಕನ್ನಡಿಯ ರೀತಿಯಲ್ಲಿ ಕನ್ನಡ ಪ್ರದೇಶಗಳು ಬಿದ್ದಿರುವುದನ್ನು 'ಒಡನುಡಿ' ಕವಿತೆಯಲ್ಲಿ ಮನವರಿಕೆ ಮಾಡಿಕೊಡುತ್ತಾ ಪಂಚಮುಖವಾಗಿ ಮೈದೋರಿರುವ (ಪಾರ್ವತಿ ನೀನೇ ಸಲಹು) ನಾಡನ್ನು ಆಯಾ ಭೂ ಪ್ರದೇಶಗಳ ವನ್ಯದೇವತೆಗಳ (ಕಡಲ ಪಾವನ ಪರಂಪರೆ) ಹರಕೆಯೊಂದಿಗೆ ಒಂದುಗೂಡಿಸುವ ಆಶಯ ಮುಖ್ಯವಾದದ್ದು.

ಭಾರತದ ಅಂದಿನ ಪಾರತಂತ್ರ್ಯದ ಸ್ಥಿತಿಗತಿಗಳಿಂದ ಬಿಡುಗಡೆ ಹೊಂದಲು ದೇಶವನ್ನು ತಾಯಿಯಾಗಿ, ಪ್ರಾಂತ್ಯಗಳನ್ನು ಆಕೆಯ ಮಕ್ಕಳನ್ನಾಗಿ ನೋಡುವ ನೋಟ ಭಾರತದ ಎಲ್ಲ ಪ್ರಾದೇಶಿಕ ಚಿಂತನೆಗಳಲ್ಲೂ ಹಾಸು ಹೊಕ್ಕಾಗಿದೆ. ಬೇಂದ್ರೆಯವರ ಕಾವ್ಯದಲ್ಲಿಯೂ ಈ ನೆಲೆಯ 'ಭಾರತ ಕರ್ನಾಟಕ ಸಂಬಂಧವನ್ನು ಕಾಣಬಹುದು' ಜೊತೆಗೆ,

ನಾಡು–ದೇಶಗಳ ಅಧೀನತೆಗಳನ್ನು ಮೆಟ್ಟಿ ಮುಂದುವರೆಯುವ ಆವೇಶ–ಆಶಯಗಳು ಬೇಂದ್ರೆ ಕಾವ್ಯದಲ್ಲಿ ಗಾಢವಾಗಿವೆ. ಅವರು

"ಇಗೋ ಹೊರಟೆವು ಬಿಡುಗಡೆಗಾಗಿ

ಬಹರಾರು ನಮಗೆದಿರಾಗಿ" (ಬಿಡುಗಡೆ)

ಎಂಬ ದೃಢ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಭಾರತೀಯರನ್ನು ಒಟ್ಟಾಗಿ ನೋಡುವ ಕವಿ ಭಾರತ ಖಂಡಕ್ಕೆ ಹತ್ತು ನಾಡುಗಳನ್ನು ಸೇರಿಸಿ ನಡುವೆ "ಕನ್ನಡ ಸಿರಿ ಕಂಕಣ"ವನ್ನು (ಕೇಳಿ ನುಡಿ, ಕಂಡುನಡೆ) ನೆಲೆಗೊಳಿಸುತ್ತಾರೆ. ಅವರಿಗೆ ಕರ್ನಾಟಕವು ನಾಲ್ಕು ದಳಗಳ ಮಧ್ಯೆ ವಿಶೇಷ ಬೀಜವನ್ನೊಳಗೊಂಡ ಭಾಗ ಅಷ್ಟೇ ಅಲ್ಲದೆ "ಧರ್ಮಗುಂಜಾರವ ಕವಿಯ ಬೀಡು".

ಬೇಂದ್ರೆ (ನಾಡು ನುಡಿ) ಚಿಂತನೆಯಲ್ಲಿ ಉದ್ವೇಗವಿದ್ದರೂ ಸಂಕುಚಿತ ಮನೋವೃತ್ತಿ ಕಾಣಿಸುವುದಿಲ್ಲ.

"ಕನ್ನಡವೂ ಭಾರತವೂ ಜಗವೆಲ್ಲವೂ ಒಂದೇ"

ಎಂಬ ವಿಶಾಲವಾದ ವಿಶ್ವವ್ಯಾಪಿ ದೃಷ್ಟಿ ಅಡಗಿದೆ.

ಕಾವ್ಯದ ಮೂಲಕ ಏಕೀಕರಣದ ತುರ್ತನ್ನು ವೀರತ್ವ–ಕೆಚ್ಚುಗಳೊಂದಿಗೆ ಪ್ರತಿಪಾದಿಸುತ್ತಾರೆ.

"ಏಳು ಶೂರರ ಖಣೀ ಏಳು ಧೀರರ ರಾಣಿ

ಏಳು ತೀರದ ವೀರ ರಸದ ವಾಣಿ" (ಕನ್ನಡಿಗರ ಉದಯರಾಗ)

ಎನ್ನುವ ಮೂಲಕ ಕನ್ನಡಿಗರ ಆಂತರ್ಯದ ಅಭಿಮಾನವನ್ನು ಎಚ್ಚರಿಸುತ್ತಾರೆ. ಕಾಲದ ಕ್ರಿಯಾಶೀಲತೆಯ ತೀವ್ರತೆಗಳನ್ನು, ಮೇರೆಗಳನ್ನು ದಾಟಿ ನಡೆವ ವೇಗವನ್ನು ಪ್ರತಿ ನಿಧಿಸುವ ಕವಿ ಕರ್ನಾಟಕ ಏಕೀಕರಣಕ್ಕಾಗಿ ಎಚ್ಚೆತ್ತುಕೊಳ್ಳಲು

'ನನ್ನ ಕನ್ನಡ ನಾಡ ಚೆನ್ನರೇಳುವಂತೆ,

ಕೂಗುವೆಯಾ ಹೇಳು ಕೋಗಿಲೆ' (ಕೋಗಿಲೆ)

ಎಂದು ಕೋಗಿಲೆಯನ್ನು ಕೇಳಿಕೊಳ್ಳುವುದು – ಮನಸ್ಸಿಗೆ ನಾಟುತ್ತದೆ. ಭಾರತದ ಸ್ವಾತಂತ್ರ್ಯ, ದಾರಿದ್ರ್ಯತನಗಳ ನಿರ್ಮೂಲನ, ಬಿಡುಗಡೆಗಾಗಿ ಒಗ್ಗಟ್ಟು, ಹಸಿವಿನಿಂದ ಮುಕ್ತವಾಗುವ ಆಶಯಗಳು (ಮೂವತ್ತ ಮೂರು ಕೋಟಿ ತುತ್ತಿನ ಚೀಲ, ನಾಡುಗುಡಿ ಮೊದಲಾದ ಕವನಗಳಲ್ಲಿ) ಸಾಕಾರತೆ, ಶೂದ್ರ, ಕಲ್ಪನೆಗಳನ್ನು ಕವಿ ಕನ್ನಡದ ಅಭಿಮಾನದೊಂದಿಗೆ ಗುರುತಿಸಿರುವುದು ವಿಶೇಷವಾದ ಸಂಗತಿ.

ಕನ್ನಡದ ದೀಕ್ಷೆ ಪಡೆದವ (ಆರ್ಯ) ಹಾಗೂ ಕನ್ನಡ ನಡೆ ಇರದವ (ಶೂದ್ರ)ನ ನಡುವಿನ ಭಿನ್ನತೆಗಳು.

"ಕುಲವೊಂದೇ ಸ್ಥಳವೊಂದೇ ನೀತಿಯ ನೆಲೆಯೊಂದೆ

ಹೀಗೆನ್ನದೆ ಹೆರವರು ಅವರಿದ್ದರು ಒಂದೇ

ಇರದಿದ್ದರೂ ಒಂದೇ . . . . . . . . ." (ಒಂದೇ ಕರ್ನಾಟಕ)

ಕವಿ ಇಲ್ಲಿ ಕನ್ನಡ ಭಕ್ತಿಯ ಆಧಾರದ ಮೇಲೆ ಆಸಕ್ತಿ ನಾಸ್ತಿಕರನ್ನು ಗುರುತಿಸುತ್ತಾರೆ. ಅಂತಹ ನಾಸ್ತಿಕತೆಯನ್ನು ಹೋಗಲಾಡಿಸಿ ಜಯಘೋಷವನ್ನು ಮಾಡುತ್ತಾರೆ. ಇದೇ ಪರಮಾರ್ಥ.

'ಒಂದೇ ಒಂದೇ ಕರ್ನಾಟಕ ಒಂದೇ' ಇದು ಮಾನವನ ಆತ್ಮವನ್ನು ಪಾವನಗೊಳಿಸುವ ಕವನವಾಗುವುದು.

ಕರ್ನಾಟಕ ಏಕೀಕರಣದ ಬಗ್ಗೆ ಪರ–ವಿರೋಧದ ನೆಲೆಗಳು ಎರಡು ಅದಕ್ಕಿಂತ ಹೆಚ್ಚಿನ ಕರ್ನಾಟಕಗಳ ರಚನೆ ಬಗ್ಗೆ ನಡೆದ ವಿವಾದಗಳು ಕವಿ ಬೇಂದ್ರೆಯವರನ್ನು ಭಿನ್ನವಾಗಿ ಪ್ರತಿ ಕ್ರಿಯಿಸುವಂತೆ ಮಾಡಿದೆ. ಅವರು

"ಬೇಗದಿಂ ಕರುನಾಡ ಹರಕುತನವನ್ನು

ಕಳೆದು ಹಿರಿದಾಗೋಣ ಸೀಮೆಯನು ದಾಟಿ" (ಸೀಮೋಲ್ಲಂಘನೆ)

ಎನ್ನುವುದರ ಮೂಲಕ ಆಂತರಿಕ ಹಾಗೂ ಬಾಹ್ಯವಾದ ಸಂಕುಚಿತ ಗಡಿಗಳನ್ನು ದಾಟಲು ಕಾತುರತೆಯನ್ನು ಅಭಿವ್ಯಕ್ತಿಸಿದ್ದಾರೆ. ಕನ್ನಡದ ಚಿಂತನೆಯನ್ನು ಅಷ್ಟಾಂಗಗಳಲ್ಲಿ ಜೋಡಿಸಿ ಅದಕ್ಕೆ ಇರುವ ದರ್ಶನ ಶಕ್ತಿಗಳ (ಕನ್ನಡದ ಕಮಳ) ಮಹತ್ವವನ್ನು ತಿಳಿಸಿ

"ಯೋಗ–ಭೋಗದ ಭೂಮಿಯಾಗಿ ಸಾಗುವ ಹಾಗೆ

ಕನ್ನಡದ ನಾಡು ಮಾಡು" (ಹರಕೆ)

ಎಂಬ ಹರಕೆ ಹೊರುವುದು ಕವಿಯ ಆಧ್ಯಾತ್ಮಿಕ ನೆಲೆಯ ಚಿಂತನೆಗಳಿಗೆ ಒಳ್ಳೆಯ ಉದಾಹರಣೆ. ಮೈಸೂರಿಗರು ಏಕೀಕರಣದ ಬಗ್ಗೆ ಉತ್ತರ ಕರ್ನಾಟಕದವರೊಂದಿಗೆ ಸಮ್ಮತಿಸಲು ಮುಂದಾಗುವ ಸಂದರ್ಭವೊದಗಿ ಬಂದಾಗ "ಮೈಸೂರಿನ ರಥ ಹೊಡೆದ ಸಾರಥಿ" ಎನ್ನುವ ಬೇಂದ್ರೆ ಅವರು ಕನ್ನಡದ ಭೂ ಪ್ರದೇಶಗಳು ಎಂದೆಂದೂ ಒಂದೇ ಆಗಿದ್ದವು. ಆಗಿವೆ ಎಂಬುದನ್ನು

"ನೈಜಕ್ಕದೆ ಪಂಚಮುಖ

ಐದರೊಳದೆ ನೈಜಸುಖ

ಒಂದೇ ಅದು ಐದಾಗಿದೆ

ಐಬೆರಳಿನ ಕೈದಾಗಿದೆ" (ಪಂಚಮುಖ)

ಎನ್ನುವುದರ ಮೂಲಕ ಸ್ಪಷ್ಟಪಡಿಸುತ್ತಾರೆ. ಇಲ್ಲಿ ಐದು ತುಂಡಾದ ಪ್ರದೇಶಗಳು ಕೈ ಬೆರಳುಗಳ ಉಪ ಅಂಗಗಳಾಗಿ ಒಂದುಗೂಡಿರುವುದನ್ನು ಹೇಳುತ್ತವೆ.

ಕರ್ನಾಟಕದ ಏಕೀಕರಣದ ದಿನವನ್ನು ಕವಿ "ಬಹುದಿನದ ಸೂರ್ಯೋದಯ" ವಾಗಿದೆ ಎಂಬುದರ ಮೂಲಕ ಕರೆಕೊಟ್ಟು ಎಚ್ಚರಿಸುತ್ತಾರೆ. ಆದರೆ ಎಲ್ಲಾ ಭೂ ಪ್ರದೇಶಗಳು

ಒಂದುಗೂಡದೆ ಬೇರೆ ರಾಜ್ಯಗಳಲ್ಲಿ ಅವು ಸೇರಿಕೊಂಡಿದ್ದು, ಗಡಿ ಸಮಸ್ಯೆಗೆ ಕಾರಣ ಆಯಿತು. ಇಂಥ ಗಡಿ ಸಮಸ್ಯೆಯು ಬಗೆಗಿನ ಸಂಘರ್ಷಗಳನ್ನು ಕವಿ

"ಹಿಗ್ಗುತಿರಲಿ ಬಿಡುಗಡೆ

ಹಿಗ್ಗುತಿರಲಿ ಬಿಡುಗಡೆ

ಅಲ್ಲಿ ಇಲ್ಲಿ ಎಲ್ಲೆ ಏಕೆ ?

ಎಲ್ಲಿ ಇರಲಿ ಒಳಗಡೆ" (ಹಿಗ್ಗುತಿರಲಿ ಬಿಡುಗಡೆ)

ಎನ್ನುವುದರ ಮೂಲಕ ಮನಸ್ಸಿನ ಆಂತರಿಕ ಭಾವವನ್ನು ವಿಶಾಲಪಡಿಸುತ್ತಾರೆ. ಅಲ್ಲದೆ ಆ ಮೂಲಕ ಎಲ್ಲವೂ ಇಂಡಿಯಾದ ಒಳಗಡೆಯೇ ಸ್ಥಾನಗಳನ್ನು ಪಡೆದುಕೊಂಡಿವೆ ಎಂಬುದನ್ನು ಸಹ ಹೇಳುವ ತುಡಿತ ಅಂತರ್ಗತವಾಗಿದೆ.

ಒಟ್ಟಾರೆ ಕವಿ ಕನ್ನಡದ ಪ್ರದೇಶಗಳ ಒಂದುಗೂಡಿರುವ ಸನ್ನಿವೇಶವನ್ನು 'ಕನ್ನಡ ಬೀಜದ ಹೂವಾಗಿಸಿದ' ಸ್ಥಿತಿಯಲ್ಲಿ ಸಾಕ್ಷಾತ್ಕರಿಸಿಕೊಳ್ಳುವುದು ಇಲ್ಲಿ ಮುಖ್ಯವಾದುದು. ಕನ್ನಡ ನಾಡು-ನುಡಿಗಳ ಬಗ್ಗೆ ಅರಿವು ಮೂಡಿಸಲು ಬೇಂದ್ರೆ ಅವರು ಕರೆದಲ್ಲಿಗೆ ಹೋಗಿದ್ದಾರೆ. ಆ ಮೂಲಕ ಏಕೀಕರಣ ತುರ್ತನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ.

ಕನ್ನಡ ಕಾವ್ಯ ಪರಂಪರೆಯನ್ನು ಜೀವಂತವಾಗಿ ಮುಂದುವರಿಸುವಲ್ಲಿ ಬೇಂದ್ರೆ ಅವರ ಪಾತ್ರ ಹಿರಿದಾದುದು. ಅವರೇ ಹೇಳುವಂತೆ 'ಕನ್ನಡದ ಅಶರೀರ ವಾಣಿಯು ಸಾವಿರ ಬಾಯಿಗಳಿಂದ ತನ್ನ ಕನಸನ್ನು ಕನ್ನಡಿಸುತ್ತಿದೆ. ಆ ಸಾವಿರ ಬಾಯಿಗಳಲ್ಲಿ ನನ್ನದೊಂದು ಅದೇ ನನ್ನ ಧನ್ಯತೆ'[7] ಎಂದು ಸಹೃದಯರಿಗೆ ನಿವೇದಿಸಿಕೊಳ್ಳುವ ಮಾತು ಅವರ ಪ್ರತಿಭೆಯ ದ್ಯೋತಕವಾಗಿದೆ. ಕನ್ನಡವನ್ನು ಹಾಗೂ ಕನ್ನಡ ನಾಡನ್ನು ಅಖಂಡವಾಗಿ ಪ್ರೀತಿಸಿದರು. ಕನ್ನಡ ಭಾಷೆ ಹಾಗೂ ನಾಡನ್ನು ಕುರಿತಾದ ಬೇಂದ್ರೆಯವರ ಕವಿತೆಗಳು ಅಂದಿಗೆ ಅಗತ್ಯವಾಗಿದ್ದ ನಾಡು-ನುಡಿಗಳ ಪ್ರೇಮವನ್ನು ಉಕ್ಕೇರಿಸುವಲ್ಲಿ ವಹಿಸಿದ ಪಾತ್ರ ದೊಡ್ಡದು. ಅವು ಕಾವ್ಯ ದೃಷ್ಟಿಯಿಂದಲೂ ಗಮನಾರ್ಹವಾಗಿದೆ.

ತನ್ನ ಕಾವ್ಯ ಭಾರತದ ಮಂತ್ರವಾಗಿ ಹೊರ ಹೊಮ್ಮಲಿ ಎಂದು ಆಶಿಸುವ ಬೇಂದ್ರೆ ಭಾರತ ಸ್ವತಂತ್ರವಾಗಿದೆ ಅಂತೆಯೇ ನಿನ್ನ ಕಾವ್ಯವು ಸ್ವತಂತ್ರವಾಗಿರಲಿ, ಯಾವುದೇ ದಾಸ್ಯಕ್ಕೊಳಗಾಗದೇ ಸತ್ಯದ ಉದ್ಧಾರಕ್ಕಾಗಿ ಬರೆ. ಏಕೆಂದರೆ ಹರಿಯುವ ಖಡ್ಗಕ್ಕಿಂತಲೂ, ಕವಿಯ ಲೇಖನಿಯು ಹೆಚ್ಚು

ಹರಿತವಾದುದು. ಪಡೆದ ಸ್ವಾತಂತ್ರ್ಯಕ್ಕೆ ಮಡಿಯುವುದೇ ಸ್ವರ್ಗ ಎನ್ನುತ್ತಾರೆ. ಕವಿಯಾದವನು ಸುಮ್ಮನಿರುವುದು ಅವನ ಪರತಂತ್ರದ ದಾಸ್ಯದ ಸಂಕೇತ.

ಸ್ವಾತಂತ್ರ್ಯವನ್ನು ಕುರಿತು ಭವ್ಯ ಕಲ್ಪನೆಯನ್ನು ಕೊಡುತ್ತಾ, ಸ್ವಾತಂತ್ರ್ಯವೆಂಬುದು ದೇವ ಮಾನವರೆಲ್ಲರ ಕನಸು, ಅದು ನನಸಲಾಗಲೆಂದು ಬಯಸುತ್ತಾರೆ. ಬಂಧನವೆಂಬುದು ಹಿರಿ ಹಾವಿನಂತೆ ಅವರ ನಾಶಕ್ಕೆ ಸ್ವಾತಂತ್ರ್ಯವೆಂಬ ಹದ್ದು ಬರಬೇಕು. ಹಾಗೆಯೇ ಸೆರೆ ಎಂಬುದು ಕತ್ತಲೆ. ಆ ಕತ್ತಲೆ ಕಳೆಯಲು ಸ್ವಾತಂತ್ರ್ಯದ ಬೆಳಕು ಮಾಡಬೇಕು.

ತಾಯಿ–ಮಕ್ಕಳ ಸಂವಾದವನ್ನು ಒಳಗೊಂಡ ಕವಿತೆ 'ಕನಸಿನೊಳಗೊಂದು ಕನಸು' ಕನಸಿನ ತಂತ್ರದ ಮೂಲಕ ನಾಡಿನ ಬಗೆಗೆ ಅಭಿಮಾನ ತೋರಿದ್ದಾರೆ. ಇದು ಕನ್ನಡ ನಾಡಿನ ಮತ್ತು ಕನ್ನಡಿಗರ ಸ್ಥಿತಿ–ಗತಿಯನ್ನು ಚಿತ್ರಿಸುತ್ತದೆ. ಇದು ಕನಸಿನಲ್ಲಿ ಕಂಡ ಕಾಣ್ಕೆಯಾಗಿದೆ. ಇಲ್ಲಿ ಕನ್ನಡ ತಾಯಿಯೊಡನೆ ಕನ್ನಡಿಗನ ವಾದ–ಸಂವಾದವಿದೆ. ಕನ್ನಡ ತಾಯಿಯ ಸ್ಥಿತಿ ಹೇಳ ಹೆಸರಿಲ್ಲದಂತಾಗಿದೆ. ಬೇಡುವುದನ್ನು ಕೊಡುವೆಯಾ ಎಂದು ಕನ್ನಡ ತಾಯಿ ಕೇಳಿದಾಗ ಆತ ಹಿಂಜರಿಯುತ್ತಾನೆ. ಕನ್ನಡ ತಾಯಿಯು ಹುರುಪಿನಿಂದ ಬಾ ಎಂದಾಗ ಸಿದ್ಧನಾಗುತ್ತಾನೆ. ಆದರೆ ಆಕೆಗೆ ಗಂಡಸಾದರೆ ನಿನ್ನ ಬಲಿ ಕೊಡುವೆನು? ಎನ್ನಲು ಅವನ "ಮನವು ನಡುಗಿತು ತನುವು ನವಿರಿಗೊಳಗಾಯ್ತು, ನೆನವು ನುಗ್ಗಿತು ಹೊರಗೆ ಕಂಡ ಬೆಳಗಾಯ್ತು, ಕನ್ನಡಿಗ ತನ್ನನ್ನು ಬಲಿಕೊಡಲು ಸಿದ್ಧನಿದ್ದಾನೆಯೆ ಎಂಬ ಬಗ್ಗೆ ಸ್ಪಷ್ಟವಾಗಿ ತಿಳಿಯುವುದಿಲ್ಲ. ಕೊನೆಯ ಸಾಲುಗಳಿಂದ ಆತ ಅಂತಹ ತ್ಯಾಗಕ್ಕೆ ಸಿದ್ಧನಿಲ್ಲನೆಂಬುದು ತಿಳಿದು ಬರುತ್ತದೆ. ಕನ್ನಡಿಗರ ಹಿಂಜರಿಕೆ, ಸೋಮಾರಿತನ, ಕನ್ನಡನಾಡಿನ ಕನ್ನಡಿಗರ ದುಸ್ಥಿತಿಯನ್ನು ಅತ್ಯಂತ ವಾಸ್ತವಿಕ ನೆಲೆಯಲ್ಲಿ ಅಷ್ಟೇ ಪ್ರಭಾವಯುತವಾಗಿ ಕಟ್ಟಿಕೊಡುತ್ತದೆ. ಇಲ್ಲಿ ನಾಟಕೀಯ ಶೈಲಿಯಿದೆ. 'ಕರ್ನಾಟಕ ಏಕೀಕರಣದ ಆಂದೋಲನಕ್ಕೆ ಸಮಸ್ತ ಕರ್ನಾಟಕದ ಭಾವನಾತ್ಮಕ ಬೆಂಬಲವನ್ನು ದೊರಕಿಸುವುದರಲ್ಲಿ ಈ ಪದ್ಯ ಯಶಸ್ವಿಯಾಯಿತು'. [೨]

ಕನ್ನಡ ನಾಡನ್ನು ಉಳಿಸಿ, ಬೆಳೆಸಲು 'ಹೋಗೋಣ ಬಾ' ಇನ್ನು ಸೀಮೆಯ ದಾಟಿ ಎಂದು ಎಲ್ಲರನ್ನು ಕರೆಯುತ್ತಾರೆ.

> "ಒಂದೇ ತಾಯಿಯ ಮಕ್ಕಳಂತೆ ಒಂದಾಗಿ
>
> ಅಂದಗೇಡನು ಕೆಡಿಸಿ ಚೆಲುವು ಚೆಂದಾಗಿ
>
> ಮುಂದಿರುವ ಜನರ ಸರಿಮೇಲು ಮುಂದಾಗಿ

ಸಾಗೋಣ ಹೋಗೋಣ ಸೀಮೆಯನು ದಾಟಿ" ನಾವು ಹಿಂದೆ ಇದ್ದೇವೆ, ಇತರರಿಗೆ ಸರಿಸಮವಾಗಿ ಬೆಳೆದು ನಿಲ್ಲಬೇಕು. ಅದಕ್ಕೆ ನಾವೆಲ್ಲ ಒಗ್ಗಟ್ಟಾಗಿ ಹೋರಾಡಬೇಕು ಎಂದು ಗೆಳೆಯರೆಲ್ಲರನ್ನು ಆಹ್ವಾನಿಸುತ್ತಾರೆ. ಛಲದಿಂದ ಗುರಿಯಿಟ್ಟು ಹೋರಾಡಿದರೆ ಕನ್ನಡ ನಾಡಿನ ಹರಕುತನವನ್ನು ಹೋಗಲಾಡಿಸಿ ಹಿರಿದು ಮಾಡಬಹುದು.

ಬಿಡುಗಡೆ ಎಂಬುದು ಒಂದು ನಾಡಿನ ಪ್ರಾಣ. ಅದಲ್ಲಿದಿದ್ದರೆ ನಾಡು ದುರ್ಬಲವಾಗುತ್ತದೆ. ಹಾಗಾಗಿ ಅದಕ್ಕೆ ಬಿಡುಗಡೆ ಎಂಬ ಉಸಿರನ್ನು ತುಂಬಲು ಹೊರಡಬೇಕು. ಈಗ ನಮ್ಮವರ ಮೇಲೆ ಬೇರೆಯವರ ಒತ್ತಾಯದ ನೊಗವಿದೆ. ಅದನ್ನು ಕಿತ್ತೆಸೆದರೆ ಮಾತ್ರ ಜೀವಕ್ಕೆ ಸುಖ, ಆಗ ನಮ್ಮ ತಾಯಿಗೂ ಸಂತೋಷವಾಗುತ್ತದೆ.



ಆಕಾಶದಲ್ಲಿ ಹಾರುವ ಹಕ್ಕಿಗೆ ಕಡಲಿನಲ್ಲಿ ಈಜುವ ಮೀನಿಗೆ, ಹರಿಯುವ ಹೊಳೆಗೆ ಸ್ವಾತಂತ್ರ್ಯವಿದೆ. ಆದರೆ ನಮಗೆ ಮಾತ್ರ ಬೇಡಿಯಿದೆ. ಈ ಸ್ಥಿತಿಗೆ ನಾಚಿಕೆಯಾಗುತ್ತಿದೆ. ನಾಡ ಬಿಡುಗಡೆಗಾಗಿ ಹೊರಟವರಿಗೆ ದೇವರ ಬೆಂಬಲದ ಅವಶ್ಯಕತೆಯೂ ಇದೆ ಎನ್ನುತ್ತಾರೆ.

ಆದರೆ ಸ್ವಾತಂತ್ರ್ಯವೆಂಬುದು ಪ್ರಳಯಕಾಳಿ, ರುದ್ರ ಕಾಳಿಯ ರೂಪ ಪಡೆದಿವೆ. ಕಾಳಿ ನರಬಲಿಯನ್ನೇ ಅಪೇಕ್ಷಿಸುತ್ತಿದ್ದಾಳೆ. ತನ್ನ ಬಲಗಾಲಿನಲ್ಲಿ ಆ ಬಿಡುಗಡೆಯನ್ನು ಮೆಟ್ಟಿ ನಿಂತಿದ್ದಾಳೆ. ಪ್ರಾಣಿಗಳನ್ನು ಕೊಂದರೆ ಕೇಳುವರು, ಕಾಯುವವರುಂಟು, ಮಾನವ ತನ್ನನ್ನು ತಾನೇ ಕೊಲ್ಲುತ್ತಿದ್ದಾನೆ. ಇದರಲ್ಲಿ ಸ್ವಾರ್ಥವಿದೆ, ತ್ಯಾಗವಿದೆ, ಆತ್ಮಾಹುತಿಯೂ ಇದೆ. ಇಂತಹ ನರಬಲಿ ಅಶ್ವಮೇಧಕ್ಕಿಂತಲೂ ಹೆಚ್ಚಿನದೇ ಆಗಿದೆ.

"ಇದುವೇ ಕಾಳಿಯ ಪೂಜೆಯ ಶುದ್ಧ

ಇದಕ್ಕೆ ಹುಂಬರು ಎಂಬರು ಯುದ್ಧ"

ಇಂತಹ ಕವನವನ್ನು ಸಾಮ್ರಾಜ್ಯಶಾಹಿಯ ವಿರುದ್ಧ ಜನರನ್ನು ಹುರಿದೆಬ್ಬಿಸಲು ರಚಿಸಿದ್ದರೆಂಬ ಆರೋಪದ ಮೇಲೆ ಭಾರತವನ್ನು ಅಂದು ಆಳುತ್ತಿದ್ದ ಬ್ರಿಟಿಷರು ಕವಿಗೆ ಶಿಕ್ಷೆ ವಿಧಿಸಿದ್ದರು.

ನಾಡಿಗಾಗಿ ಯುದ್ಧ ಮಾಡಬೇಕಾದ ಪರಿಸ್ಥಿತಿ ಒದಗಿದರೆ ಎಲ್ಲಾ ಒಂದಾಗಿ ಬನ್ನಿ ಎಂದು ಹೋರಾಟಕ್ಕೆ ಕರೆ ಕೊಡುವ ಬೇಂದ್ರೆ ನಮ್ಮ ಒಳಜಗಳದಿಂದ ಅನ್ಯರಿಗೆ ದಾರಿ ಮಾಡಿಕೊಡದೆ ನಾವುಗಳು ಒಂದಾಗಿ ತಾಯಿ ನೆಲಕ್ಕಾಗಿ ಹೋರಾದಿದರೆ ಮಾತ್ರ ಶತೃಗಳನ್ನು ಸೆದೆಬಡಿಯಲು ಸಾಧ್ಯ

ಎನ್ನುತ್ತಾರೆ. ಎಲ್ಲರೂ ಒಂದೆಂಬ ಭಾವದಿಂದ ಹೋರಾಡಿ ಮಡಿದರೂ ಅದು ಅಮೃತದ ಸಾವಾಗುತ್ತದೆ. ನನ್ನದು ತನ್ನದೆಂದು ಕಿತ್ತಾಡದೇ ಅನ್ಯರು ನಮ್ಮನ್ನು ಆಳುವುದಕ್ಕೆ ಅವಕಾಶ ಕೊಡದೆ ನಮ್ಮನ್ನು ನಾವೇ ಆಳಬೇಕು ಹೀಗೆ ಶುಚಿಯಾದ ಮನಸ್ಸುಳ್ಳವರಾಗಿ ಪ್ರೀತಿಯನ್ನು ಬೆಳೆಯಬೇಕು ಎಂದು ಆಶಿಸುತ್ತಾರೆ.

ಸ್ವಾತಂತ್ರ್ಯ ಪಡೆದು ಕೆಲವು ವರ್ಷಗಳೇ ಕಳೆದಿವೆ ಮತ್ತೆ ಆ ದಿನದ ಆಚರಣೆ ಬಂದಿದೆ, ಬರುತ್ತಿರುತ್ತದೆ. ಆದರೂ ನಿಜವಾದ ಸ್ವಾತಂತ್ರ್ಯ ಇನ್ನೂ ಸಿಕ್ಕಿಲ್ಲ ಅಥವಾ ಅದರ ಸದ್ಬಳಕೆಯಾಗಿಲ್ಲ ಎಂಬುದನ್ನು ಕವಿ ಗಮನಿಸುತ್ತಾರೆ. ಏಕೆಂದರೆ ನಾವು ಸಾಧಿಸಬೇಕಾದದ್ದು ಇನ್ನೂ ಇದೆ.

"ಹುಟ್ಟು ದಿನವೊ, ಬೆಳೆದ ದಿನವೊ ಮತ್ತೆ ಬಂತು ಈ ದಿನಾ

ದುಡಿಯಬೇಕು, ಕಟ್ಟಬೇಕು ಪ್ರಜಾರಾಜ್ಯ ಜನಮನಾ"

ಎಲ್ಲರೂ ಶಿಕ್ಷಿತರಾಗಬೇಕು ಒಳ್ಳೆಯ ಗುಣವುಳ್ಳವರಾಗಿರಬೇಕು, ಮತಾಂಧತೆಯನ್ನು ಬಿಡಬೇಕು ಅಜ್ಞಾನ ಅಹಂಕಾರವನ್ನು ದಾಟಿ ಬೆಳೆಯಬೇಕು ಆದರೂ ವರುಷ ವರುಷವೂ ಬರುವ ಈ ದಿನ ನಮಗೆಲ್ಲ ನೂತನವಾದುದು ಈಶ ಭಕ್ತಿಯಷ್ಟೇ ದೇಶ ಭಕ್ತಿಯೂ ಪ್ರತಿಯೊಬ್ಬನಲ್ಲೂ ಇರಬೇಕು. ದೇಶ ಸುವ್ಯವಸ್ಥಿತವಾಗಿರಬೇಕು. ಧರ್ಮ ಮಾರ್ಗದಲ್ಲಿ ನಡೆಯಬೇಕೆಂದು ಮುಂತಾಗಿ ಹೇಳುತ್ತಾ, ಇದುವರೆಗೆ ಆಗಿರುವ ಮತ್ತು ಮುಂದೆ ಆಗಬೇಕಾದ ಕಾರ್ಯವನ್ನು ಚಿಂತಿಸುತ್ತಾರೆ. ನಿಜವಾದ ಸ್ವಾತಂತ್ರ್ಯ ಲಕ್ಷಣಗಳನ್ನು ಹೇಳುತ್ತಾರೆ. ಆದರೆ ಇಂತಹ ಸ್ವಾತಂತ್ರ್ಯದ ಕನಸು ಕಸವಾಗಿ ಬಿಟ್ಟಿದೆ ಎಂಬ ಕೊರಗನ್ನು ಕವಿ ಇನ್ನೊಂದು ಕವನದಲ್ಲಿ ಹೇಳಿಕೊಂಡಿದ್ದಾರೆ.

"ಸ್ವಾತಂತ್ರ್ಯವೋ ಇದುವು ಯಾ ತಂತ್ರವೋ

ಬಲ್ಲವರ ಕೈಗೆ ಬಾಗುವ ಯಂತ್ರವೋ"

ಎಂದು ದುಃಖದಿಂದ ಹೇಳಿಕೊಂಡಿದ್ದಾರೆ.

ಸ್ವಾತಂತ್ರ್ಯವೆಂಬುದು ಕೇವಲ ಮಾತಾಗಿ ಉಳಿಯದೇ ಅನುಕೃತಿ ರೂಪವನ್ನು ತಾಳಲಿ, ಮೊದಲು ತಮ್ಮನ್ನು ತಾವು ಆಳಿ ಮುಂದೆ ಬರಲಿ ಮೇಲೇಳಲಿ ಎಂದು ಆಶಿಸುತ್ತಾರೆ.

ರಾಷ್ಟ್ರ ಎಂಬ ಪರಿಕಲ್ಪನೆಯಲ್ಲಿ ಪ್ರಜಾಜನಕ್ಕೆ ಮಹತ್ವ, ರಾಷ್ಟ್ರದ ಉನ್ನತೆ, ಏಳಿಗೆ ಎಂಬುದು ಅಲ್ಲಿಯ ಜನರನ್ನು ಅವಲಂಭಿಸಿದೆ. ಹಾಗಾಗಿ ಜನವೇ ರಾಷ್ಟ್ರವು, ರಾಷ್ಟ್ರವೇ ಜನವು

ಎಂಬ ಮಾತು ರೂಪುಗೊಂಡಿದೆ. ಆದ್ದರಿಂದ ರಾಷ್ಟ್ರದ ಜನತೆ ಸನ್ಮಾರ್ಗದಿಂದ ನಡೆದರೆ ರಾಷ್ಟ್ರವೂ ಅಭಿವೃದ್ಧಿ ಹೊಂದುತ್ತದೆ. ಭಾರತ ನವಶಕ್ತಿಗೆ ಕವಿಯು ಹೀಗೆ ಪ್ರಾರ್ಥಿಸುತ್ತಾರೆ.

"ಹೃಜ್ಜಾತೇ ! ಚಿನ್ಮಾತೇ !

ಹೃನ್ಮಾತೇ ! ಚಿಜ್ಜಾತೇ ! ಭಾರತ ನವಶಕ್ತಿ !

ನಮ್ಮಾತ್ಮವೆ, ಪರಮಾತ್ಮವೆ, ಕರುಣಿಸು ತವಭಕ್ತಿ"

ಇಂತಹ ಭರತ ಮಾತೆಯ ಚೇತನದಲ್ಲಿ ಜನಿಸಿದ ಮಹಾನ್ ವ್ಯಕ್ತಿಗಳ, ಅವರ ಕಾರ್ಯದ ಸ್ಮರಣೆ ಮಾಡಿದ್ದಾರೆ. ಪರಮಹಂಸ, ಬುದ್ಧ, ಮಹಾವೀರ, ಅರವಿಂದ, ಗಾಂಧಿ ಮುಂತಾದವರ ಉಲ್ಲೇಖವಿದೆ. ಇವರೆಲ್ಲಾ ಭಾರತ ಮಾತೆಯ ಚೇತನದಿಂದ ಮೂಡಿ ಬಂದವರು. ದಾರಿದ್ರ್ಯ ಅಳಿದು ಸಮಾನತೆ ನೆಲೆಸಿದಾಗ ಸಹಜೀವನದ ಸಾರ್ಥಕ್ಯ ಸಾಧ್ಯ ಎಂದು ನಂಬಿದವರು.

ಅನುಭಾವ ಸಹಿತವಾದ ಜೀವನದ ಅರಿವನ್ನು ಬಿನ್ನಾಣ ಎನ್ನಬಹುದು. ಇಲ್ಲಿ ಸರಸ್ವತಿ, ಲಕ್ಷ್ಮಿ ಮತ್ತು ಪಾರ್ವತಿ ಮೂವರಲ್ಲೂ ಪ್ರಾರ್ಥನೆ ಸಲ್ಲಿಸುತ್ತಾರೆ. ಪ್ರತಿಯೊಬ್ಬ ಭಾರತೀಯನಲ್ಲೂ ಇದು ಮೂಡಿ ಬರಲಿ ಎನ್ನುತ್ತಾರೆ.

ಕನ್ನಡ ನಾಡನ್ನು ಕುರಿತು ಕವಿ ಜಾನಪದದ ದಾಟಿಯಲ್ಲಿ ಹಾಡಿದ್ದಾರೆ.

ಕೋಲುಕೋಲಿನ ಆಟ, ಕೂಡಿ ಕೊಳಲಿನ ಆಟ

ರಾಸಲೀಲೆಯ ಕೋಲ ।

ಬಾಲಬಾಲೆಯರಾಟ, ಸೂತ್ರ ತಾಯಿಯ ನೋಟ,

ಹಾಸಶೀಲೆಯ ಕೋಲ ॥

ಕೋಲಾಟ ಪದದ ಮೂಲಕ ಕವಿ ಕನ್ನಡ ನಾಡಿನ ಸೊಬಗನ್ನು ಕಟ್ಟಿಕೊಡುತ್ತಾರೆ. ತಂತ್ರದ ಯುಕ್ತಿ, ಪ್ರೇಮ ಭಕ್ತಿ, ಯಂತ್ರ ಶಕ್ತಿ, ತ್ಯಾಗ ಭುಕ್ತಿ, ಲೀಲಾಮುಕ್ತಿ ಎಲ್ಲವೂ ಇಲ್ಲಿದೆ.

ಭರತ ಮಾತೆಯ ಮಗಳು ಕನ್ನಡ ತಾಯಿ ಎಂಬುದು ಬೇಂದ್ರೆಯವರ ಕಲ್ಪನೆಯೂ ಹೌದು, ಅಂತಹ ಭರತ ಮಾತೆಯ ಪೂರ್ವ ಪಶ್ಚಿಮ ಘಟ್ಟಗಳ ತೊಟ್ಟಿಲಿನಲ್ಲಿ ಮಲಗಿದ ಕನ್ನಡ ಕಂದವ್ವನನ್ನು ತೂಗುತ್ತಾಳೆ, ಲಾಲಿ ಹಾಡುತ್ತಾಳೆ.

ಕನ್ನಡ ಪಾವನ ಪರಂಪರೆಯನ್ನು ಕಟ್ಟಿಕೊಡುತ್ತಾರೆ. ಪರ್ವತ, ಶಿಖರಗಳು, ನದ–ನದಿಗಳು ಕನ್ನಡ ನಾಡಿನ ನೆರೆ ಹೊರೆಯಲ್ಲಿರುವವರು ಎಲ್ಲರನ್ನು ಹೇಳಿ ಮೈಸೂರಿನ ಚಾಮುಂಡಿ, ಕೊಲ್ಲೂರು ಮೂಕಾಂಬಿಕೆ, ಬನವಾಸಿ ಗೋಕರ್ಣದ ಭದ್ರಕಾಳಿ, ಬನಶಂಕರಿ, ಗುಡ್ಡದ ಎಲ್ಲಮ್ಮ ಎಲ್ಲರು ಹರಸಬೇಕೆಂದು ಬೇಡುತ್ತಾರೆ.

ರಾಷ್ಟ್ರದ ಸಂಕೇತಗಳಲ್ಲಿ ರಾಷ್ಟ್ರವೂ ಕೂಡ ಪ್ರಮುಖವಾದದ್ದು, ಅಂತೆಯೇ ನಮ್ಮ ರಾಷ್ಟ್ರೀಯ ಹೂವು ಕಮಲ.

ಚಾನ್ಮೈಯೆ ಕದಿರ ಗರಿಗರಿ ಬಿಚ್ಚಿ ನಿಮಿರಿರಲು

ಚೈತ್ಯಾದಾಕಾಶದಲಿ ಏರುತಿಹುದು

ಎಂದು ಆ ಕಮಲದ ಹೂ ಅಷ್ಟದಳವನ್ನು ಹೊಂದಿದೆ ಎಂದೂ, ಆ ದಳಗಳೆಲ್ಲವೂ ಒಂದೊಂದು ಶಕ್ತಿಯ ಕುರುಹು ಎನ್ನುತ್ತಾರೆ.

ಕನ್ನಡ ಭಾಷೆಯ ಮಹಿಮೆಯನ್ನು ಅದರ ಗುಣವನ್ನು ಸಾರಿ ಹೇಳುತ್ತಾರೆ. ಕನ್ನಡ ನುಡಿ ಎಂಬುದು ಅನ್ಯರ ಮಾತಿಗೆ ಕಿವುಡಾಗಿ, ಕುರುಡಾಗಿ ನಡೆಯಬೇಡಿ ಎಂದು ಎಚ್ಚರಗೊಳಿಸಿ ಸರಿಯಾದ ವಿಷಯವನ್ನು ತಿಳಿದು ಪರೀಕ್ಷಿಸಿ ನಡೆಯುವಂಥದ್ದು ಎನ್ನುತ್ತಾರೆ.

ಕನ್ನಡಿಗರ ಧೈನ್ಯತೆಯ ಬದುಕು ಒಂದು ಬದುಕೇ ಅಲ್ಲವೆಂದು ಎಚ್ಚರಗೊಳಿಸುತ್ತಾ, ಅಲ್ಲದೇ ಮಾತಿನಲ್ಲಿ ಒಂದು ಹೇಳಿ ಮನದಲ್ಲಿ ಮತ್ತೊಂದನ್ನು ನೆನೆಯುವ ಇಬ್ಬಗೆಯ ನೀತಿಯನ್ನು ಅದು ಒಪ್ಪುವುದಿಲ್ಲ ಕನ್ನಡ ನುಡು ಯಾರಿಗೂ ಹೆದರಿ ಹಿಂಜರಿಯುವಂತದ್ದಲ್ಲ. ಕನ್ನಡಿಗರೆಲ್ಲ ಕಣ್ತೆರೆದು ನೋಡಿ ಒಂದಾಗಿ ಹೋರಾಡಿದರೆ ಮಾತ್ರ ಕನ್ನಡ ಉಳಿಯುವುದು, ಇಲ್ಲವಾದರೆ ಅದರ ಅಭಿವೃದ್ಧಿ ಸಾಧ್ಯವಿಲ್ಲ.

'ಇದು ನಿಮ್ಮದು, ಇದು ನಮ್ಮದು ಇದು ಎಲ್ಲರ ಮಮತೆ' ಆಗಿದೆ. ಇಂತಹ ನಮ್ಮೆಲ್ಲರ ನಾಡನ್ನು ಸಲಹು ಎಂದು ಪಾರ್ವತಿಯನ್ನು ಪ್ರಾರ್ಥಿಸುತ್ತಾರೆ. ನಮ್ಮಲ್ಲಿ ಹಲವು ರೀತಿಯ ಸಾಹಿತ್ಯ ರಾಶಿಯಿದೆ, ರಸಯೋಗವಿದೆ.

"ಕರ್ನಾಟಕವನು ಕಡೆದರು, ಹೊರಟಿತು

ಕನ್ನಡವೆನ್ನುವ ನವನೀತ"

ಹೀಗೆ ಕರ್ನಾಟಕದ ಸಾರವೆ ಕನ್ನಡವಾಗಿದೆ. ಇದಕ್ಕೆ ಈಶ್ವರನ ಒಲುಮೆಯಂತೆಯೇ ಕನ್ನಡಿಗರ ಶ್ರದ್ಧೆಯೂ ಮುಖ್ಯ ನಮ್ಮದೆಂಬ ಛಲ ಜನತೆಯಲ್ಲಿ ಮೂಡಿ ಬರಬೇಕು. ಎಲ್ಲರೂ ಐಕ್ಯದಿಂದ ಒಂದಾಗಿ ಹೋರಾಟಕ್ಕಿಳಿಯಬೇಕು. ಆಗ ಮಾತ್ರ ಜಯ ಲಭಿಸಿ, ನಾಡಿನಲ್ಲಿ ಶಾಂತಿ ನೆಲೆಸುತ್ತದೆ.

ಕವಿ ಇಲ್ಲಿ ಆಸ್ತಿಕ, ನಾಸ್ತಿಕ ಎಂದು ಕರೆಯುವುದು ದೈವ ಭಕ್ತಿಯ ಆಧಾರದಲ್ಲಲ್ಲ. ಕನ್ನಡ ಭಕ್ತಿಯ ಆಧಾರದ ಮೇಲೆ ಕನ್ನಡವೆಂಬುದು ಇಲ್ಲಿ ದೈವ ಸಮಾನ ಅದಕ್ಕಾಗಿ ದೀಕ್ಷೆ ತೊಡುವವರು ಆರ್ಯರು, ಕನ್ನಡ ನಡೆ ಇರದವರೇ ಶೂದ್ರರು ಎನಿಸುತ್ತಾರೆ. ಜಾತಿ ಆಧಾರದ ಮೇಲೆ ಭೇದವನ್ನೆಣಿಸದೆ ಕನ್ನಡಾಭಿಮಾನದ ಮೂಲಕ ಭೇದ ಕಲ್ಪಿಸುವ ಈ ದೃಷ್ಟಿ ವಿಶೇಷವಾಗಿ ಮೂಡಿದೆ. ಅಂತಹ ನಾಸ್ತಿಕತೆಯನ್ನು ಹೋಗಲಾಡಿಸಿ ಜಯಘೋಶವನ್ನು ಮಾಡುತ್ತಾರೆ ಇದೇ ಪರಮಾಪ್ತ.

'ಒಂದೇ ಒಂದೇ ಒಂದೇ ಕರ್ನಾಟಕ ಒಂದೇ !'

ಕನ್ನಡ ಕವನಕ್ಕೆ ಎಂತಹ ಶಕ್ತಿ ಇದೆ ಎಂದರೆ ಇದು ಮಾನವನ ಆತ್ಮವನ್ನು ಪಾವನಗೊಳಿಸುವ ಕವನವಾಗುವುದು.

'ಕೇಳಿ ನುಡಿ' 'ಕಂಡು ನುಡಿ' ಎಂದು ಕನ್ನಡಿಗರಿಗೆ ತಿಳಿವು ನೀಡಿದ್ದಾರೆ. ಕನ್ನಡಿಗರ ಬದುಕು ಎಂತದ್ದಿರಬೇಕೆಂಬುದನ್ನು ಹೇಳುತ್ತಾರೆ.

"ಇಲ್ಲಿ ಸಲ್ಲಬೇಕು ಮೊದಲು

ಅಲ್ಲಿ ಸಲ್ಲತಕ್ಕದ್ದು

ಭಾವ ಶುದ್ಧವಿರದ ಬಾಳು

ಮಾತಿನಿಂದ ಸಿಕ್ಕದು"

ನಮ್ಮ ಕನ್ನಡ ನಾಡಿನ ಸುತ್ತಮುತ್ತ ಮರಾಠ, ತೆಲುಗು, ತಮಿಳು, ತುಳು, ಕೊಂಕಣ ಭಾಷೆಗಳಿಂದ ಕೂಡಿದೆ. ಕನ್ನಡಿಗರು ಕನ್ನಡಕ್ಕಾಗಿ ಕಂಕಣ ಬದ್ಧರಾಗಿ ದುಡಿಯಬೇಕು ಇದೇ ಬಾಳಿನ ಅಂದಾ ಎನ್ನುತ್ತಾರೆ.

ಕವಿ ಕನ್ನಡಿಗರಾದರೂ ಅವರು ಜನಿಸಿರುವುದು ವಿಶ್ವಮಾತೆಯ ಗರ್ಭದಲ್ಲಿ. ಕವಿಗಿರುವುದು ಐವರು ತಾಯಂದಿರು ಅಂದರೆ ವಿಶ್ವಮಾತೆ, ಭೂಮಾತೆ, ಭರತಮಾತೆ, ಕನ್ನಡ ತಾಯಿ ಹಾಗೂ

ಜನ್ಮ ಕೊಟ್ಟ ತಾಯಿ, ವಿಶ್ವಮಾತೆಯ ಒಂದು ಭಾಗ ಭೂಮಾತೆ, ಆಕೆಯ ಒಂದು ಭಾಗ ಭರತಮಾತೆ, ಅವಳ ಒಂದಂಶ ಕನ್ನಡ ಮಾತೆ.

ಕನ್ನಡ ಮಾತೆಯ ಮಗಳೆ ಹೆತ್ತ ತಾಯಿ – ಹೀಗೆ ಐವರು ಮುತ್ತೈದೆಯರ ಮಗ ಎಂಬ ಅವರ ಹೇಳಿಕೆ ಅತ್ಯಂತ ವಿನೂತನವಾಗಿದೆ.

"ವಿಶ್ವದೊಳನುಡಿಯಾಗಿ ಕನ್ನಡಿಸುತಿಹನಿಲ್ಲಿ

ಅಂಬಿಕಾತನಯನಿವನು !"

ಹೀಗೆ ಅಂಬಿಕಾತನಯನು ವಿಶ್ವದೊಳನೊಡಿಯನಾಗಿ ಕನ್ನಡಿಸುತ್ತಾ, ಕನ್ನಡಕ್ಕೆ ವಿಶ್ವ ಕಾವ್ಯದ ಮೆರಗನ್ನು ನೀಡಿರುವುದು ಇಲ್ಲಿ ಪ್ರತಿಬಿಂಬಿತವಾಗಿದೆ.

ಸ್ವಾತಂತ್ರವೆಂಬುದೆ ಒಂದು ಕಾವ್ಯವಾಗಿದೆ. ಅದಕ್ಕೆ ನಾಶ, ಕೊನೆಯೆಂಬುದಿಲ್ಲ. ಸುರಭಿಯಂತೆ ಎಂದೆಂದೂ ಇರುತ್ತದೆ. ಅದೇ ಗೀತವಾದ್ದರಿಂದ ಅದರ ಪಾದಕ್ಕೆ ಗೆಜ್ಜೆ ಬೇಕಿಲ್ಲ. ಅದಕ್ಕೆ ಬೇರೆಯ ರಾಗ ಬೇಕಿಲ್ಲ. ಅದೇ ಎಂದೆಂದಿಗೂ ನಿತ್ಯ ನೂತನವಾದ ಕಾವ್ಯವೆನ್ನುತ್ತಾರೆ.

ಇಂತಹ ಕನ್ನಡ ಮುನ್ನಡೆಯಬೇಕು. ಅಂದರೆ ಇದರಿಂದ ಇತರರಿಗೆ ತೊಂದರೆಯಾಗಬಾರದು.

"ಕನ್ನಡ ಮುನ್ನಡೆ, ಯಾರ ತಲೆಮ್ಯಾಲೀ ಅಲ್ಲಾ

ಅಂತ್ಯರಿಕ್ಷಾನ ಏರಿತಲ್ಲಾ".

ನಾವು ಮುಂದೆ ಬರಬೇಕೆಂಬ ಛಲದಲ್ಲಿ, ಇತರರನ್ನು ತುಳಿಯಬಾರದೆಂಬ ಭಾವ ವ್ಯಕ್ತವಾಗಿದೆ. ಯಾರ ತಲೆಗೂ ತಾಕದಂತೆ ಆಕಾಶದಲ್ಲಿ ಸಂಚರಿಸಬೇಕು.

ಕನ್ನಡ ಭಾಷೆ ಮಾತಿನಲ್ಲಿದ್ದರೆ ಸಾಲದು ಅದು ಆಡಳಿತದಲ್ಲೂ ಬರಬೇಕೆಂಬುದು ಅವರ ಅಭಿಲಾಷೆ.

"ನಾಡ ಮತು ನುಡಿತಕೆ ಬೇಕು

ಚೊಕ್ಕ ಲೆಕ್ಕ ಕಡಿತಕೆ ಬೇಕು । ಕೇಳೋ ಜಾಣಾ"

ಎಂಬ ಅವರ ಮಾತೂ ಇದನ್ನೇ ಹೇಳುತ್ತದೆ.

ಕನ್ನಡ ನಾಡು ನನ್ನದೆಂಬ ಹೆಮ್ಮೆಯಿದೆ. ನನ್ನದೆಂಬುದು ಸ್ವಾರ್ಥದ ಮಾತಾಗದೇ 'ನನ್ನದೆಂತು ಹಾಗೇ ನಿನ್ನದೂ' ಎಂದು ನಮ್ಮೆಲ್ಲರದೂ ಈ ನಾಡು ಎನ್ನುತ್ತಾರೆ. ಬೇಂದ್ರೆ ಈಗಿರುವ ಕನ್ನಡ ನಾಡಿನ ಬಗ್ಗೆ ಅಭಿಮಾನ ಪಡುವಂತೆ ಸರ್ವ ಜಾತಿ, ಮತ, ಪಂಥ ಸಮನ್ವಿತವಾದ, ಸಾಮರಸ್ಯದ ಕನ್ನಡ ನಾಡನ್ನು ಕಾಣುವ ಅಪೇಕ್ಷೆ ಉಳ್ಳವರಾಗಿದ್ದೂ, ಮುಂದೆ ಬರುವ ಅಂತಹ ನಾಡು ನನ್ನದು ಎಂದು ಅಭಿಮಾನದಿಂದ ನುಡಿಯುತ್ತಾರೆ.

ಒಟ್ಟಿನಲ್ಲಿ ಬೇಂದ್ರೆಯವರು ತಮ್ಮ ಕವನಗಳ ಮೂಲಕ ನಾಡಿನ ಜನತೆಯಲ್ಲಿ ನಾಡು–ನುಡಿಯ ಬಗ್ಗೆ ಅಭಿಮಾನದ ಜಾಗೃತಿಯನ್ನು ಮೂಡಿಸುವ ಕಾರ್ಯದಲ್ಲಿ ಅವರದು ಕೆಲವೊಮ್ಮೆ ತೀಕ್ಷ್ಣವಾಗಿಯೂ, ಹರಿತವೆನಿಸುವಂತೆಯೂ ಬಂದಿರಬಹುದಾದದ್ದು ಸಹಜ. ಆದರೆ ಅಂದಿನ ಪರಿಸ್ಥಿತಿಯ ಅರಿವಾದಾಗ ಅದು ಅಗತ್ಯವಾಗಿಯೇ ಇತ್ತು ಎನಿಸುತ್ತದೆ.

---

[೧] ಸಾಲು ದೀಪಗಳು

[೨] ಬೇಂದ್ರೆ ಕಾವ್ಯದಲ್ಲಿ ರಾಷ್ಟ್ರ ಪ್ರಜ್ಞೆ – ಪ್ರಹ್ಲಾದ. ಬ ನೆರೇಗಲ್ಲಿ

# ಅಧ್ಯಾಯ ೬

## ಪು.ತಿ.ನ ಅವರ ಕವನಗಳಲ್ಲಿ ನಾಡು–ನುಡಿ ಪ್ರೇಮ

"ಹೊಸಗನ್ನಡ ಸಾಹಿತ್ಯದ ಶಿಖರಗಳಲ್ಲಿ ಒಬ್ಬರಾದ ಪು.ತಿ.ನ ತಮ್ಮ ಭಕ್ತ ಪ್ರಕೃತಿಯ ಪರಿಮಳ ಹಾಗೂ ಜಿಜ್ಞಾಸು ಪ್ರವೃತ್ತಿಯ ಬೆಳಕುಗಳ ಸುಸೂಕ್ಷ್ಮ ಅಲೆಗಳನ್ನು ಹಾಯಿಸಿ ತಮ್ಮ ಕೃತಿ ವಿಸರದಲ್ಲಿ ಒಂದು ವಿಶೇಷವಾದ ತನಿ ವಿಲಕ್ಷಣವಾದ ಬನಿ ಕೆನೆಗಟ್ಟಿ ನಿಲ್ಲುವಂತೆ ಮಾಡಿದರು".[೧]

ಪ್ರಸ್ತುತ ಪು.ತಿ.ನ ಕವಿತೆಗಳಲ್ಲಿ ನಾಡು ನುಡಿ ಚಿಂತನೆ ವ್ಯಕ್ತವಾಗಿರುವ ಬಗೆಯನ್ನು ನೋಡಬಹುದು.

ಪು.ತಿ.ನ ಅವರ ನಾಡಿನಕ್ಕರೆ ನಾಡಿನ ಬಗೆಗೆ ಅವರಿಗಿರುವ ಅಭಿಮಾನವನ್ನು ಅತ್ಯಂತ ಸೊಗಸಾಗಿ ಕಟ್ಟಿಕೊಡುತ್ತದೆ. ಈ ಕವನದಲ್ಲಿ ಪೂರ್ವ ಮಹಿಮಾದರ್ಶನ, ಇತಿಹಾಸಾವಲೋಕನ ನಿರ್ವೇದ, ಮುಂಜಾನೆಯ ಮುನ್ನಿರುಳು, ಉದಯ–ಗಾಂಧೀ ಜನನ ಎಂಬ ಭಾಗಗಳನ್ನು ಮಾಡಿಕೊಳ್ಳಲಾಗಿದೆ.

"ಬಾಳು ತೆರೆದಿರೆ ತಿರೆಯು ತೊಯ್ದಿರೆ ಸೂರ್ಯ ತನ್ನನುರಾಗದಿ

ದೃಷ್ಟಿಯೊಂದಿರೆ ರಸೆಗೆ ಹಸುಳೆಯ ಸ್ತನ್ಯಪಾನದ ಭಾವದಿ"

ಇವು ಕವನದ ಆರಂಭದ ಸಾಲುಗಳು. ಬಾನೆಂಬ ತಾಯಿಯ ಎದೆ ತೆರೆದಿದೆ, ಸೂರ್ಯ ತನ್ನ ಅನುರಾಗವನ್ನು ಸೂಸಿದ್ದಾನೆ, ತಿರೆ ಕೂಸಾಗಿ ಬಾನಿನ ಬೆಳಕಿನ ಸ್ತನ್ಯವನ್ನು ಉಣ್ಣಬೇಕೆಂದು ಬಯಸುತ್ತಿದೆ. ನಾಡಿನ ಚಿತ್ರಣ ಅದ್ಭುತವಾಗಿ ಮೂಡಿ ಬಂದಿದೆ. ನಮ್ಮ ನಾಡಿನ ಚೆಲುವನ್ನು ಯಾವ ರೀತಿಯಲ್ಲಿ ಬಣ್ಣಿಸಲಿ ಎಂದು ಕವಿ ಕೇಳುತ್ತಾರೆ.

ನಾಡಿನಲ್ಲಿರುವ ಮಲೆಗಳ ಸಾಲು, ಕೆರೆಗಳು, ಕಣಿವೆಗಳು, ಮಲೆಯ ಗಾಳಿ, ಕಂಪನ್ನು ಸೂಸುವ ಅವುಗಳ ಪರಿಯನ್ನು ವರ್ಣಿಸುತ್ತಾರೆ. ನಾಡಿನಲ್ಲಿರುವ ಮರಗಿಡಗಳ, ಗುಡಿಗೋಪುರಗಳ, ಪುರಗಳ ಹಾಗೆಯೆ ಸಕಲ ಕುಸುಮಗಳ ವರ್ಣನೆ ಬರುತ್ತದೆ. ಹಾಗೆಯೆ ಸುಮಧುರವಾದ ಕಲರವಗೈಯುವ ಪಕ್ಷಿಗಳ ವಿಚಾರವನ್ನು ಹೇಳುತ್ತಾರೆ.

"ಹಳ್ಳಿಯ ದಾರಿಯನ್ನು ಹೀಗೆ ಕಂಡಿದ್ದಾರೆ.

ಹಚ್ಚ ಹಸುರಿನ ನಡುವೆ ಬೆಳ್ಳನೆ ದಾರಿ ಪಯಣಕೆ ಹೊರಟಿರೆ

ನನ್ನ ಚಿತ್ರವ ದಾರಿಗನ ಗೈದೆಲ್ಲಿಗೈದಿಸಲೀ ದಿನ ?"

ಕವಿ ಇಲ್ಲಿ ಪೌರಾಣಿಕ ಪ್ರಜ್ಞೆಯಿಂದ ಹೋಲಿಕೆಗಳನ್ನು, ಉಪಮೆಗಳನ್ನು ಕೊಡುತ್ತಾರೆ. ಇದು ಕವಿಗೆ ಹೆಚ್ಚು ಪ್ರಿಯವಾದುದು. ನಾವುಗಳು ಅನ್ಯರ ಪಾಲಾದುದನ್ನು ಹೇಳಲು –

"ಮೇದಿನಿಯ ಬಲದಿಂದಲೊಯ್ಯುವ ಹಿರಿಣ್ಯಾಕ್ಷರೊ ಎಂಬೊಲು

ಅಸುರವ ಮೆರೆಸುತ್ತ ಸೆಳೆದರು ಭಾರತಾತ್ಮವನಾಂಗ್ಲರು"

ಎನ್ನುತ್ತಾರೆ.

ನಾಡಿನ ಬಿಡುಗಡೆಗಾಗಿ ಹಂಬಲಿಸುತ್ತಿರುವಾಗ ಗಾಂಧೀಜಿಯ ಜನನವಾಯಿತು. ಗಾಂಧೀಜಿ ಜನಿಸಿದ್ದು, ವ್ಯಾಪಾರದ ನೆಪದಿಂದ ದೇಶಕ್ಕೆ ಬಂದು ನಮ್ಮ ಮೇಲೆ ದರ್ಪ ತೋರಿದ ಅವರ ಬಾಧೆಯಿಂದ ನಮ್ಮವರನ್ನು, ದೇಶವನ್ನು ರಕ್ಷಿಸುವುದಕ್ಕಾಗಿ ಎನ್ನುತ್ತಾರೆ.

ಗಾಂಧೀಜಿಯ ಮಹತ್ವವನ್ನು ಮತ್ತೊಂದು ಪದ್ಯದಲ್ಲಿಯೂ ಚಿತ್ರಿಸಿದ್ದಾರೆ. ಗಾಂಧಿಯನ್ನು ಸ್ತುತಿಸುತ್ತಾರೆ. ಆ ಮೂಲಕ ನಾಡವಿಧಾತನಾದ ಗಾಂಧಿಯ ಸ್ಮರಣೆ ಮಾಡುತ್ತಾರೆ. ಕುರಿಗಳಂತೆ ಅನ್ಯರ ಮಾತಿಗೆ ತಲೆತಗ್ಗಿಸಿ ನಡೆಯುತ್ತಿದ್ದ ಭಾರತೀಯರವನ್ನು ಎಚ್ಚರಿಸಿ, ಅವರ ದೈನ್ಯತೆಗಳನ್ನು ತೊಡೆದು ಹಾಕಿದವನು ಈ ಗಾಂಧಿ.

ಹಲವು ತಾರೆಗಳಿದ್ದರೂ, ಇರುಳಿನಲ್ಲಿ ಚಂದ್ರ ಶೋಭಿಸುವಂತೆ ಗಾಂಧಿಯೂ ಕೂಡ, ಗಾಂಧೀ ತಾಳ್ಮೆಯಿಂದ ಕ್ರೌರ್ಯವನ್ನು, ಶಾಂತಿಯಿಂದ ಕೋಪವನ್ನು, ಸತ್ಯದಿಂದ ಸುಳ್ಳನ್ನು ಗೆದ್ದವನು. ಅಂತಹವನಿಗೆ ಮಣಿಯುತ್ತಾರೆ.

ಸ್ವಾತಂತ್ರ್ಯ ದೇವಿಯ ವರ್ಣನೆಯಲ್ಲೂ ಪುರಾಣ ಪ್ರತಿಮೆಯನ್ನು ಕಾಣಬಹುದು. ಕವಿಗೆ ಅದು 'ವಿಷದ ಮುಂಗವಲಂ ಕೊಂಡು ಬಂದಮೃತದಂತೆ' ಕಾಣುತ್ತದೆ.

ಸ್ವಾತಂತ್ರ್ಯಕ್ಕಾಗಿ ನಾವು ಹಲವು ವರ್ಷಗಳಿಂದ ಕಾಯುತ್ತಿದ್ದೇವೆ. ನೀನು ನೆಲಸು, ನಿನ್ನೊಳಿತಿಗಾಗಿ ಎಂತಹ ಕಷ್ಟವನ್ನಾದರೂ ಎದುರಿಸಲು ಸಿದ್ಧರಾಗುತ್ತೇವೆ. ಸ್ವಾತಂತ್ರ್ಯ ದೇವಿ ರೌದ್ರ ರೂಪಿಯಾಗಿದ್ದಾಳೆ. ಹೀಗಾಗಿ ಅವಳಿಗಾಗಿ ಹಲವಾರು ಜನ ಬಲಿಯಾಗಿದ್ದಾರೆ. ಇದು ಸಾಲದೇ? ಎನ್ನುತ್ತಾರೆ.

ಹೇಗಾದರೂ ಆಗಲಿ ಆದರೆ ಸ್ವಾತಂತ್ರ್ಯ ದೇವಿ ಮಾತ್ರ ನಮ್ಮನ್ನು ಬಿಟ್ಟು ಹೋಗ ಕೂಡದು. ಸ್ವಾತಂತ್ರ್ಯ ದೇವಿಯ ಈ ನಾಡನ್ನು ವಿಶ್ವತೋಮುಖವಾಗಿ ನಡೆಸುತ್ತಾಳೆ. ಆಕೆಯಿಂದಾಗಿ ಮಂಜು ಹರಿದು ಬೆಳಕು ಮೂಡಿದೆ. ಅಲ್ಲದೆ ಸ್ವಾತಂತ್ರ್ಯ ದೇವಿಗೆ ಕೈ ಮುಗಿಯುತ್ತಾರೆ, ಶರಣೆನ್ನುತ್ತಾರೆ. ನಮ್ಮನ್ನೆಲ್ಲಾ ಹರಸು ಎಂದು ಪ್ರಾರ್ಥಿಸುತ್ತಾರೆ.

ಸ್ವಾತಂತ್ರ್ಯ ಬಂದರೂ ಅದು ಸ್ವಚ್ಛಂದವಾಯಿತೆಂಬ ನೋವು ಅವರಿಗಿದೆ. ಅರ್ಜುನನಿಗೆ ಕುರುಕ್ಷೇತ್ರ ಯುದ್ಧದ ಸಂದರ್ಭದಲ್ಲಿ ಆದ ಪ್ರಥಮ ಅನುಭವದಂತೆ ಭಾರತಕ್ಕೆ ಆಗಿದೆ, ಗೊಂದಲವಾಗಿದೆ, ಸಮಾಧಾನವಾಗಿಲ್ಲ.

ಭಾರತವು ಬ್ರಿಟಿಷರ ಹಿಡಿತದಿಂದ ಮುಕ್ತವಾಗಿ, ಗಣರಾಜ್ಯವಾಗಿ ಕೂಡ ಸ್ಥಾಪಿತವಾದಾಗ ಕವಿ ಆನಂದದಿಂದ ಹಾಡಿ ಹೊಗಳಿದ್ದಾರೆ. ಭಾರತ ಈಗ ಹೊಸ ಹುಟ್ಟನ್ನು ಪಡೆದಿದೆ. ಅಂತಹ ನವ ಭಾರತಕ್ಕೆ ಜಯವಾಗಲೆಂದು ಆಶಿಸುತ್ತಾರೆ.

ರಾಜ ಮಹಾರಾಜರುಗಳ ಆಡಳಿತ ಕೊನೆಗೊಂಡು ಪ್ರಜಾಪ್ರಭುತ್ವ ವ್ಯವಸ್ಥೆ ಸ್ಥಾಪಿತಗೊಂಡಿದೆ. ಇಂದು ನೆಲದಲ್ಲಿ, ಜನತೆಯಲ್ಲಿ ಹೊಸ ಚೇತನ ಮೂಡಿದೆ, ಯುವ ಜನ ಹುರುಪಿನಿಂದ ನುಗ್ಗುತ್ತಿದ್ದಾರೆ.

ಹಣ್ಣೆಲೆ ಉದುರಿ ಅದು ಗೊಬ್ಬರವಾಗುತ್ತದೆ. ಅದರ ಫಲವಾಗಿ ಹೊಸ ತಳಿರು ಹುಟ್ಟುತ್ತದೆ. ಹಾಗೆಯೇ ರೂಢಿಗಳು ಹೊಸ ಹುರುಪಿಗೆ ಗೊಬ್ಬರದಂತೆ ಸಾಕಾರವಾಗಿವೆ.

ಇವುಗಳ ಬಲದಿಂದ ತನ್ನತನವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದೆ ನಾಡು ನಮ್ಮದೆಂಬ ಅಭಿಮಾನ ಧೀರರಲ್ಲಿ ಮೂಡುತ್ತಿದೆ. ಇಂತಹ ನವ ಭಾರತಕ್ಕೆ ಶುಭವಾಗಲಿ, ಮಂಗಳವಾಗಲಿ ಎಂದು ಸಂತರೆಲ್ಲರೂ ಹಾರೈಸುತ್ತಾರೆ. ನಾಡಿನಲ್ಲಿ ಸರ್ವರ ಉದ್ಧಾರವೂ ಆಗಬೇಕೆಂಬ ಸರ್ವೋದಯದ ಕಲ್ಪನೆಯಿದೆ. ಅನ್ಯರಿಗೆ ತಲೆಬಾಗಿ ದೇಹಿ ಎಂದು ಬೇಡುವ ಬುದ್ಧಿ ನಮ್ಮರಿಗೆ ಇಲ್ಲದಾಗಲಿ. ಲೋಕದ ಹಿತಕ್ಕಾಗಿ ಅಹಿಂಸೆಯಿಂದ, ಅತಿಯಾದ ಪ್ರೇಮದಿಂದ ನಮ್ಮವರೆಲ್ಲಾ ದುಡಿಯುವಂತಾದಾಗ ನಾಡಿನಲ್ಲಿ ಸಂತೋಷ, ಆನಂದ ನೆಲೆಸುತ್ತದೆ.

ಇಂತಹ ಗಣರಾಜ್ಯದ ದಿನ ನೆನೆದು, ಈ ತಿಂಗಳು ಜನವರೀ ಅಂದರೆ ಸಂಕ್ರಾಂತಿಯ ಹಬ್ಬ ಬರುತ್ತದೆ. ಅದು ಸರ್ವೋದಯದ ದಿನ ಎಂದು ಕೆಲವರು ಭಾವಿಸಿದರೂ, ಸಾಮಾನ್ಯ ಜನರ ದೃಷ್ಟಿಯಲ್ಲಿ ಇದರಲ್ಲಿ ಯಾವ ಕ್ರಾಂತಿಯೂ, ಯಾರ ಉದಯವೂ ಆಗಲಿಲ್ಲ ಎಂಬುದಾಗಿ ವಿಡಂಬಿಸುತ್ತಾರೆ 'ಈ ತಿಂಗಳು ಜನವರೀ' ಕವಿತೆಯಲ್ಲಿ.

ಒಂದು ಹೊಸ ರೀತಿಯಿಂದ ಈ ಕವಿತೆ ರಚಿತವಾಗಿದೆ. ಆವರಣದಲ್ಲಿ ಕೊಟ್ಟಿರುವ ಮಾತುಗಳು ಶ್ರೀಸಾಮಾನ್ಯರ ಮಾತುಗಳೆಂದು ಭಾವಿಸಬಹುದು.

ಸ್ವಾತಂತ್ರ್ಯವಾಗಲಿ, ಗಣರಾಜ್ಯವಾಗಲಿ ಬಲಿಷ್ಟರ, ದೊಡ್ಡವರ ಉಪಯೋಗಕ್ಕಾಯಿತೇ ವಿನಃ ಬೇರೆ ಯಾವ ಪ್ರಯೋಜನವೂ ಇಲ್ಲ.

ಸಾಮಾನ್ಯ ಜನರಿಗೆ ಆಗಬೇಕಾದ ಸುಧಾರಣೆ, ಸೌಲಭ್ಯಗಳಾವುವು ಇದರಿಂದ ಲಭಿಸಿಲ್ಲ. ಹಾಗಾಗಿ ಅವರಿಗೆ ಬ್ರಿಟಿಷರ ಆಡಳಿತವಿದ್ದರೂ ಒಂದೇ, ದೇಶ ಗಣರಾಜ್ಯವಾಗದಿದ್ದರೂ ಒಂದೇ ಅವರಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಹಾಗಾಗಿ ಯಾವುದೇ ಬದಲಾವಣೆ, ಸುಧಾರಣೆಗಳಾದರೂ ಅದರಿಂದ ಸಾಮಾನ್ಯರಿಗೂ ಪ್ರಯೋಜನವಾಗುವಂತೆ ಅನುಕೂಲವಾಗುವಂತಹ ಬದಲಾವಣೆಗಳು ಉಂಟಾಗಬೇಕು. ಕೇವಲ ಕೆಲವೇ ಜನರ ಒಳಿತಾಗಿ ಅದು ಬರಕೂಡದೆಂಬುದನ್ನು ಇಲ್ಲಿ ಮನೋಜ್ಞವಾಗಿ ಚಿತ್ರಿಸಿದ್ದಾರೆ. 'ಸ್ವಾತಂತ್ರ್ಯ ಪ್ರಾಪ್ತಿಯ ಹೊಸದರಲ್ಲಿ ನಡೆದ ಇಬ್ಬರು ವ್ಯಕ್ತಿಗಳ ಸಂಭಾಷಣೆಯೇ ಎಂಬಂತೆ ಅಣಕದಿಂದ ಕೂಡಿದ ವ್ಯಂಗ್ಯವಿದೆ'.[2] ಆದರೂ ಹೇಡಿತನದಿಂದ, ಭಿಕ್ಷೆ ಬೇಡುವ ಜನರಿರುವ ವರ್ತಮಾನದ ಪರಿಸ್ಥಿತಿಯೂ ಇರುವುದನ್ನು ಕವಿ ಕಂಡು ಮರುಗುತ್ತಾರೆ.

"ನಿನ್ನ ದೇವಿ ಎಂದ ಮಂದಿ

ಆಗಿ ಹೋದರೆಂದಿಗೋ

ದೇಹಿ ಎಂದು ತಿರುಪೈಗೈಯ –

ನೆತ್ತಿದವಳು ನೀನಿಗೋ!"

ಎಂದು ಭಾರತೀಯರ ಅಸಾಹಯಕತೆ, ದೌರ್ಬಲ್ಯಗಳನ್ನು ವಿಡಂಬಡಿಸುತ್ತಾರೆ.

ಕನ್ನಡ ನಾಡು–ನುಡಿಗೆ ಒದಗಿದ ಸ್ಥಿತಿಯ ಬಗ್ಗೆ ಕವಿಗೆ ದುಃಖವಿದೆ. ನಮ್ಮ ನುಡಿಗೆ ವನವಾಸ ಪ್ರಾಪ್ತವಾಗಿದೆ. ಆದರೂ ಕವಿಗೆ ಮುಂದೆ ಅದರ ವೈಭವದ ಕಾಲ ಮರಳಿ ಬರಬಹುದೆ ಎಂಬ ಆಶಾಭಾವವಿದೆ. ಕನ್ನಡ ನಾಡಿನಲ್ಲಿಯೇ ಕನ್ನಡ ಭಾಷೆ ಬೇಡವಾಗಿದೆ. ಅಂದರೆ ನಮ್ಮವರೆ ನಮ್ಮತನವನ್ನು ಬಿಟ್ಟುಕೊಟ್ಟಿದ್ದಾರೆ. ನಮ್ಮ ಮನೆಯಲ್ಲಿ ಮನೆ ಒಡತಿಗೆ ಹೊರಗಿನ ನಂಟರ ಕಾಟ ಏರ್ಪಟ್ಟರೆ ಅದು ಎಂತಹ ಸ್ಥಿತಿ. ಹಾಗೆಯೇ ಆಗಿದೆ ಈ ನಮ್ಮ ನುಡಿಗೆ ನಮ್ಮ ನಾಡಿನಲ್ಲಿ ಇತರರ ಭಾಷೆ ಮೇಲುಗೈ ಪಡೆದು ಕನ್ನಡಕ್ಕೆ ಕಂಟಕವಾಗಿ ಪರಿಣಮಿಸಿವೆ.

ಇಂತಹ ದುಸ್ಥಿತಿಗೆ ನಮ್ಮವರೂ ಕಾರಣರಾಗಿದ್ದಾರೆ. ಕಾಪಾಡುವುದು ತಮ್ಮ ನೆಲವೇ ಅದನ್ನೆ ಬರಡೆಂದು ಬಗೆದು ಅನ್ಯ ನೆಲವನ್ನು ಆಶ್ರಯಿಸುವ ನಮ್ಮವರು ಬೇರೆಯವರ ನುಡಿಗೆ ಕೈಯೊಡ್ಡುವವರಿದ್ದಾರೆ. ಕನ್ನಡಿಗರಿಗೆ ಕನ್ನಡದ ಬಗೆಗೆ ಮಮತೆಯಿಲ್ಲದಾಗಿದೆ. ಇದೊಂದು ಶಾಪವೆ ಸರಿ ಎನ್ನುತ್ತಾರೆ. ಅನ್ಯ ಭಾಷೆಯ ಮೋಹಕ್ಕೆ ಒಳಗಾದವರು ಅರ್ಥವಾಗದ ಭಾಷೆಯಲ್ಲಿ ಮಾತಾಡುತ್ತಾರೆ. ಅವರ ಮಾತಿನಲ್ಲಿ ಅರ್ಥದ ಹೊಂದಾಣಿಕೆ ಇಲ್ಲದಿದ್ದರೂ ಅದರ ಮೋಹಕ್ಕೆ ಸಿಲುಕಿದ್ದಾರೆ. ಇದರಿಂದ ಮುಕ್ತಿ ಎಂದು? ಕಾಯಾ, ವಾಚಾ, ಮನಸಾ ಹೀಗೆ ತ್ರಿಕರಣ ಶುದ್ಧಿಯಾಗಿ ದುಡಿಯುವುದೆಂದು? ಅನ್ಯ ಭಾಷೆ, ಅನ್ಯರ ಹಿಡಿತದಿಂದ ಮೈಗೊಡವಿ ಮೇಲೆದ್ದಾಗಲೇ, ಶಿಕ್ಷಿತರಾದಗಲೇ ಕನ್ನಡ ನಾಡು–ನುಡಿ ಉಳಿಯುವುದು, ಹೊಳೆಯುವುದು. ಇಲ್ಲವಾದರೆ ನಾಡಿಗೆ ಒದಗುವ ದುಸ್ಥಿತಿಯನ್ನು ಮುಂದೆ ಹೇಳುತ್ತಾರೆ.

ಮೊದಲು ಉತ್ಸಾಹದಿಂದ ಮುನ್ನುಗ್ಗುತ್ತಿದ್ದ ಯುವಕರು ಅವರ ಮಾತು ಈಗ ತಣ್ಣಗಾಗುತ್ತಿದೆ. ಇದಕ್ಕೆ ಕಾರಣ ಯುವಕರು ಯಾವುದೋ ಆಮಿಷಕ್ಕೆ ಒಳಗಾಗಿರುವುದು. ಹೀಗಾಗಿ ಹೊರಗಿನವರ ಭಾಷೆ ನಮ್ಮ ಶಾಲೆಗಳಲ್ಲಿ ಬೆಳಗುತ್ತಿದೆ. ನಮ್ಮ ಭಾಷೆ ಕತ್ತಲೆಯ ಕೋಣೆಯಲ್ಲಿ ಉಳಿದಿದೆ. ವಿಜ್ಞಾನದ ಹೆಸರಿನಲ್ಲಿ ನಾಡಿನ ಸಂಪತ್ತು, ಸೌಂದರ್ಯವೆಲ್ಲ ನಶಿಸುತ್ತಿದ್ದೆ. ಭಾರತ ಆಸರೆಯೆಂದು ತಿಳಿದು ಕಿಚ್ಚನ್ನು ನಂಬಿದೆ. ಇದು ಅದನ್ನು ಸುಟ್ಟು ನಾಶ ಮಾಡುವುದು ಅದಕ್ಕೆ ತಿಳಿದಿಲ್ಲ. ಹೀಗೆ ನಾಡಿನಲ್ಲೆಲ್ಲಾ ದುರ್ಬಲತೆ ಆವರಿಸಿ ಬರ್ಬರತೆಯಿಂದ ಕೂಡಿದೆ. ಇದನ್ನು ಹೋಗಲಾಡಿಸಲು ಅನ್ಯರ ಆಳ್ವಿಕೆಯನ್ನು ಇಲ್ಲವಾಗಿಸಿ ಮನುಜರಾಗಿ ಬಾಳುವ ಛಲವನ್ನು ಜನತೆ ಹೊಂದಬೇಕು. ಹೊಗಳಿಕೆ ತೆಗಳಿಕೆಗೆ ಕಿವಿಗೊಡದೆ ಬುದ್ಧಿವಂತರಾಗಬೇಕು. ಯಾವ ಪಾತಕಕ್ಕಾಗಿ ನಿನ್ನ ಮಕ್ಕಳನ್ನು ಹೀಗೆ ಹೀನದೀನತೆಯ ಶಾಪದಲ್ಲಿ ಬಂದಿಸಿರುವೆ ಎಂದು ಪ್ರಶ್ನಿಸುತ್ತಾರೆ ಭಾರತಮಾತೆಯನ್ನು. ಈ ಶಾಪವನ್ನು ಹೋಗಲಾಡಿಸಿ ಅಭಿವೃದ್ಧಿಯಾಗುವಂತೆ ಮಾಡು ಎಂದು ಪ್ರಾರ್ಥಿಸುತ್ತಾರೆ.

'ನವ ಭಾರತದ ತರುಣರಾವು' ಯುವ ಜನಾಂಗದ ನುಡಿ ಕಹಳೆಯಾಗಿರುವ ಕವನ. ಭರತ ಮಾತೆಯ ಮಮತೆಯ ಮಡಿಲು ಈ ಎಳೆಯರಿಗೆ ಮೀಸಲು. ನವಭಾರತದ ಅಣುಗರು, ಭರತ ಮಾತೆ ಮರೆಯಲ್ಲಿಯೇ ಕೋರಿದ ಶುಭದ ಹರಕೆಯಲ್ಲೇ ಮೊಳೆತಿರುವವರು, ಭರತ ಮಾತೆ ದಾಸ್ಯ ಶೃಂಖಲೆಯಲ್ಲಿದ್ದುಕೊಂಡು ಸೆರೆಯಲ್ಲಿಯೇ ಗಳಿಸಿಕೊಟ್ಟ ಬಯಕೆಯಲ್ಲಿಯೆ ಬಲಿತಿರುವವರು. ಸುಯಿಲ ಸೆಕೆಗೆ ಮಾಗಿ, ಭಯದ ಹುಳಿಯನ್ನು ನೀಗಿರುವ ನವಭಾರತದ ಅಣುಗರು ಇದೀಗ ಭರತಮಾತೆಗೆ ಜಯಘೋಷ ಹಾಕುತ್ತ ತಲೆಬಾಗಿದ್ದಾರೆ. "ಹಾಗಿಲ್ಲದೆ ತಲೆಯನೆತ್ತಿ ಸಿಂಗದಂತೆ

ನಡೆವೆವು” ಎಂಬುದು ಇವರ ಸಂಕಲ್ಪ. ಅವರ ಮೈ ಸೋತಿಲ್ಲ, ಮನಸ್ಸು ಕುಗ್ಗಿಲ್ಲ, ಭೇದವೆಂಬುದಿಲ್ಲ, ಬಳಲಿಕೆಯೆಂಬುದು ಅವರಿಗೆ ಇಲ್ಲ. ಅವರು ಹೇಳುತ್ತಾರೆ –

“ನಮ್ಮರಿಷಡ್ವರ್ಗಗಳೆಲ್ಲ

ನಮಗೆ ಆಳು, ಅರಸಲ್ಲ;

ನಮ್ಮ ಮತಿಗೆ ಧೃತಿಯುಂಟು,

ನಮ್ಮ ಧೃತಿಗು ಮತಿಯುಂಟು

ನವ ಭಾರತದಣುಗರಾವು . . . . .”

ಕವಿ ಯುವವಾಣಿಯ ಈ ಮೊಳಗನ್ನು ಕೇಳಿಸುತ್ತಾರೆ. ಹಿರಿಯ ಬಾಳು ನಮ್ಮ ಗುರಿ. ಸಿರಿಯ ಬಾಳೆ ನಮಗೆ ಸರಿ. ಅದು ಎಲ್ಲೇ ಇರಲಿ, ಹೇಗೆ ಇರಲಿ, ಮುಗಿಲ ಮೇಲೆ ನಿಂತಿರಲಿ, ಏಳು ಕಡಲನ್ನು ದಾಟಿರಲಿ, ಅಥವಾ ಇಲ್ಲೇ ಅವಿತಿರಲಿ, ಅದು ನಮ್ಮ ಕೈಗೇ ಬರಲಿ ಎಂಬ ಆತುರ ನಮ್ಮದಾಗಲೆಂಬುದು ನವ ಭಾರತದ ತರುಣರ ಉತ್ಸಾಹಭರಿತ ಕರೆ. ಕವಿ ಇಲ್ಲಿ ಯುವಶಕ್ತಿಯ ಮೂಲಕ ನವಭಾರತದ ಸಮೃದ್ಧಿಯನ್ನು, ಸತ್ವವನ್ನು ಕಾಣ ಬಯಸಿದ್ದಾರೆ.

ಕನ್ನಡ ನಾಡಿನ ಮಹಿಮೆಯನ್ನು ಸ್ತುತಿಸುತ್ತಾ ‘ದಯಗೈ ಕನ್ನಡ ವಾಣೀ’ ಎಂದು ಆಕೆಯನ್ನು ಪ್ರಾರ್ಥಿಸುತ್ತಾರೆ. ಕವಿ ಕೇವಲ ನಾಡಿಗಷ್ಟೆ ಅಲ್ಲದೆ ತಾಯ್ನಾಡಿನ ವೀರ ತೇಜಗಳಿಗೂ ಶರಣೆನ್ನುತ್ತಾರೆ. ಇದು ಕವಿಯ ವಿನಮ್ರಾಭಾವ ಪ್ರಕಟಗೊಂಡಿರುವ ಬಗೆಯಾಗಿದೆ.

ಮಕ್ಕಳು ತಾಯಿಯನ್ನು ಬೇಡುವಂತೆ ತಾಯ್ನಾಡು ಕೂಡ ಜನತೆಯಿಂದ ಕೆಲವನ್ನು ಅಪೇಕ್ಷಿಸುತ್ತದೆ. ತಾಯಿ ಮಕ್ಕಳಿಂದ ಕಾಣಿಕೆಯಾಗಿ ಕೆಲವನ್ನು ಬೇಡುತ್ತಾಳೆ. ಆದರೆ ಅವು ಯಾವುದೇ ವಸ್ತುಗಳಾಗಿರದೆ, ತಾಯ್ನಾಡ ರಕ್ಷಣೆಗೆ ಅಗತ್ಯವಾಗಿರಬೇಕಾದ ಗುಣಗಳಾಗಿವೆ ಎಂಬುದು ಗಮನಾರ್ಹ. ಅಂದರೆ ಗಳಿಸಿದ್ದನ್ನು ಪೊರೆಯುವ, ಜಡತೆಯನ್ನು ನೀಗಿ ಐಸಿರಿಗೆ ಏರಿಕೆ, ಶತೃವಿನ ಧಮನ, ಧೃತಿದಕ್ಷತೆ ಮಿತ್ರಂಕರ ಕ್ಷಮೆ ಪಕ್ವತೆ ಮುಂತಾದ ಗುಣಗಳನ್ನು ಬೇಡುತ್ತಾಳೆ.

ಒಂದು ದೇಶದ ರಕ್ಷಣೆಯಲ್ಲಿ ಯೋಧರ ಪಾತ್ರ ಬಹಳ ಮುಖ್ಯವಾದುದು. ದೇಶದ ಅಳಿವು ಉಳಿವು ಯೋಧರ ನಿಷ್ಠೆಯನ್ನು ಆಧರಿಸಿರುತ್ತದೆ. ‘ಇದು ಶರಣರ ನೆಲ, ತರುಣರ ಛಲ.

ಇಂತಹ ನೆಲದ ಚರಣ ತಲಕೆ ತಮ್ಮ ಪ್ರಾಣವನ್ನು ಅರ್ಪಿಸುವುದಾಗಿ ಯೋಧರು ನಿಷ್ಠೆಯನ್ನು ಮೆರೆಯುವವರಾಗಬೇಕು. ಭಾರತದ ಮಾನ ಊನವಾದರೆ ನಾವು ಜೀವಿಸಿದ್ದೂ ಫಲವೇನು' ಎಂಬ ಭಾವ ಯೋಧರಲ್ಲಿ ಬಲಿಯಬೇಕು. ತನ್ನ ಮಾನ ದೇಶದ ಮಾನ ಎರಡೂ ಒಂದೇ ಎಂಬ ಭಾವ ಅವನಲ್ಲಿರಬೇಕು.

"ಹೊಟ್ಟೆ ಹೊರೆಯಲು
ರಟ್ಟೆ ಬೀಸುವ
ಹಿಟ್ಟಿನಾಳ್ಗಳಲ್ಲ – ನಾವು
ಹುಟ್ಟಿನಿಂದ ನಿನ್ನ ಹೊರೆವ ಹೊಣೆ ಹೊತ್ತ
ದಿಟ್ಟರಾವು – ಶಿವ ಬಲ್ಲ
ಮುಟ್ಟ ಬಹಗೆ ಬದುಕಿಲ್ಲ ನಿನ್ನ
ಮುಟ್ಟ ಬಹಗೆ ಬದುಕಿಲ್ಲ
ಎಂಬ ಛಲ ಯೋಧರಲ್ಲಿದೆ."

ಏನೇ ಆದರೂ ನಮ್ಮ ಕನ್ನಡ ನಾಡು ಸಂಪದ್ಭರಿತವಾದದ್ದು, ಸುಂದರವಾದದ್ದು, ಅದರ ಪ್ರಕೃತಿ ವೈಭವ ಬೇರೆಲ್ಲೂ ಕಾಣಲಾಗುವುದಿಲ್ಲ. ಕಡಲುಗಳಿಂದ, ಬೆಟ್ಟಸಾಲುಗಳಿಂದ ಕೂಡಿದ ಸಿರಿವಂತ ಬೀಡು ಇದಾಗಿದೆ. ಹೇರಳವಾದ ವನಸಂಪತ್ತಿದೆ. ಹಾಗೆಯೇ ನಮ್ಮ ಜನ ಕೊಡುಗೈ ದಾನಿಗಳಾಗಿದ್ದಾರೆ. ಇವರುಗಳಿಂದ ನಮ್ಮ ನಾಡು ಉನ್ನತಿಗೇರಿದೆ.

ಸೂರ್ಯ ಸುಡುವುದಿಲ್ಲ, ಚಳಿ ನಡುಗಿಸುವುದಿಲ್ಲ, ಮಳೆ–ಗಾಳಿಗಳೂ ಒಂದಾಗಿವೆ, ಅಂದರೆ ಹದವಾದ ವಾತಾವರಣವಿದೆ.

"ಸ್ವೈರಣೆ ತಪ್ಪಿರುವಳಿಮನದವರಿಂ
ಪಾರಾಗಲು ಬರೆ ಸಾಧುಜನ
ಕೋರಿದಾಸರೆಯನಿತ್ತು ಮನ್ನಿಸಿದ
ಉದಾರಿ ನಿನಗಿದೊ ನಮ್ಮ ನಮನ".

ಇಲ್ಲಿ ನಮ್ಮ ನಾಡಿನ ಜನರ ಹೃದಯದ ಔದಾರ್ಯವನ್ನು ಹೇಳಿದ್ದಾರೆ. ಹಾಗೆಯೇ ನಮ್ಮವರು ಪರಮತ ಸಹನೆಯುಳ್ಳವರೂ ಹೌದು. ಅಂದರೆ ನಮ್ಮದು ಸರ್ವಧರ್ಮ ಸಮನ್ವಯದಿಂದ ಕೂಡಿದ ಭಾವ. ಹೀಗಾಗಿಯೇ ನಮ್ಮ ದೇಶ ವಿವಿಧತೆಯಲ್ಲಿ ಏಕತೆಯನ್ನೊಂದಿದ ದೇಶವಾಗಿದೆ. ತಮಗಿಷ್ಟ ಬಂದ ದೇವರ ಉಪಾಸನೆ ಮಾಡುವ ಸ್ವಾತಂತ್ರ್ಯ ನಮ್ಮಲ್ಲಿದೆ. ಕೆಟ್ಟವರನ್ನು ಶಾಂತವಾಗಿಸುವ ಒಳ್ಳೆಯ ಜನ ನಮ್ಮವರು, ನಮ್ಮ ನಾಡು ಸತ್ವವನ್ನು, ಉನ್ನತಿಯನ್ನು ಪಡೆದಿದೆ. ಮಾನವೀಯತೆ, ಅಂತಃಕರಣ ನಮ್ಮಲ್ಲಿದೆ. ಅಲ್ಲದೆ ಮನಸ್ಸಿನ ಆಯಾಸವನ್ನು ಕಳೆಯುವಂತಹ ಕವಿಗಳಿಂದ ನಮ್ಮ ನಾಡು ತುಂಬಿದೆ. ಇವರನ್ನು ಸಂತೋಷಗೊಳಿಸಿ ಎಂದು ಒತ್ತಾಯದಿಂದ ಬೇಡಬೇಕಿಲ್ಲ. ತಾವೇ ತಾವಾಗಿ ಮನತಣಿಸುತ್ತಾರೆ. ಅಲ್ಲದೆ ನಮ್ಮ ಕನ್ನಡ ನಾಡು ಶ್ರೀಮಂತವಾದ ವನಸಂಪತ್ತನ್ನು ಹೊಂದಿದೆ, ಶ್ರೀಗಂಧಕ್ಕೆ ಹೆಸರಾಗಿದೆ. ಅಲ್ಲದೆ ಬೇಡಿಕೆಯುಳ್ಳ ಸಾಂಬಾರ ಪದಾರ್ಥಗಳಿಗೂ ಹೆಸರಾಗಿದೆ.

ಇಂತಹ ಕನ್ನಡ ನಾಡಿನಿಂದ, ನುಡಿಯಿಂದ ಭಾರತವು ತನ್ನದಾಯಿತೆಂದು ಕವಿ ಹೆಮ್ಮೆ ಪಡುತ್ತಾರೆ. ಏಕೆಂದರೆ ಕರ್ನಾಟಕ ಭಾರತದ ಒಂದು ಭಾಗ. ಇಂತಹ ನಾಡಿನಲ್ಲೆ ಕವಿಯ ಪ್ರೀತಿ ಮಡುಗಟ್ಟಿ ನಿಂತಿದೆ. ನಾಡಿಗಾಗಿಯೆ ಕವಿ ತಮ್ಮ ಬಾಳನ್ನು ಮೀಸಲಿಟ್ಟಿದ್ದಾರೆ.

ಸಂಸ್ಕೃತಿ ನಾಶದ ಕಾರ್ಯವು ಮುಸ್ಲಿಮರು ಈ ನೆಲದ ಭಾಗವಾದ ಮೇಲೂ ಇನ್ನೊಂದು ರೀತಿಯಲ್ಲಿ ಮುಂದುವರೆದುದನ್ನು 'ನಾಡಿನಕ್ಕರೆ' ಕವಿತೆಯು ಹೇಳುತ್ತದೆ.

ನಮ್ಮೀ ನಾಡಿನಸಿರಿ ಸುಗ್ಗಿಗೆ ನೆಲದಿ ಹುಳು-ಹುಪ್ಪಟೆ ಹೆಚ್ಚಿತ್ತು ಬಿಳಿಯ ಜನ ಕಾಲೂರಿತು ಎಂದು ಆತಂಕಿತರಾಗುತ್ತಾರೆ. ಭಾರತದ ಆತ್ಮವನ್ನು ವಿಜ್ಞಾನ ಪಾಶಗಳಲ್ಲಿ ಬಂಧಿಸಲು ಆಂಗ್ಲರು ಚೆಲ್ಲಿದ 'ನೆರಳತಮ'ವು ಅವರಿಗೆ ಪೂರ್ವ ತಾರುಣ್ಯದಲ್ಲೇ ಬೀರಿದ ಪ್ರಭಾವವನ್ನು ಇದರ ನಡುವೆಯೂ ತನ್ನತನವನ್ನು ಉಳಿಸಿಕೊಂಡ ಬಗೆಯನ್ನು 'ವಿದ್ಯಾಲಯ' ಕವಿತೆಯಲ್ಲಿ ವಿವರಿಸುತ್ತಾರೆ. "ಹಾಗೆ ನೋಡಿದರೆ ಪಾಶ್ಚಾತ್ಯ ಸಂಸ್ಕೃತಿಯನ್ನು ಕುರಿತಾದ ಈ ಸಾರಸಗಟಾದ ನಿರಾಕರಣೆಯ ಧೋರಣೆಯು ಪು.ತಿ.ನ ಅವರಲ್ಲಿ ತಾತ್ಕಲೀನವಾಗಿ ಬಂದಿತೋ ಅಥವಾ ಇದಕ್ಕೆ ಉತ್ತೇಜನಕರವಾಗಿದ್ದ ಸ್ವಾತಂತ್ರ್ಯೋತ್ತರ ಪರಿಸರದಲ್ಲಿ ಒಂದು ಆಫ್ಟರ್ ಥಾಟ್ ಆಗಿ ಬಂದಿತೋ ಎಂಬುದ ಬಹಳ ಕುತೂಹಲಕಾರಿಯಾದ ಪ್ರಶ್ನೆ." [೩]

ಬ್ರಿಟಿಷ್ ಸರ್ಕಾರದ ಚಾಕರಿಯಲ್ಲಿದ್ದರಿಂದ ಸ್ವಾತಂತ್ರ್ಯ ಹೋರಾಟಕ್ಕೆ ಪೂರ್ಣವಾಗಿ ತೊಡಗಿಸಿಕೊಳ್ಳಲಾಗದ ನೋವು ಅತ್ಯಂತ ತೀವ್ರವಾಗಿ "ಸಾಂತ್ವವಚನ" ಎಂಬ ಕವನದಲ್ಲಿ

ವ್ಯಕ್ತವಾಗಿದೆ "ಈ ಪ್ರಮಾಣದ ಆತ್ಮನಿಂದೆ ಮತ್ತು ಪಶ್ಚಾತಾಪವಿರುವ ಇನ್ನೊಂದು ಕವಿತೆಯನ್ನು ಪು.ತಿ.ನ ಬರೆದಿಲ್ಲ".[೪] ಕವಿಯ ಆತ್ಮ ಸಾಂತ್ವಾನದ ದಾಟಿಯ ಈ ಕವಿತೆಯಲ್ಲಿ ಆತ್ಮವು ನಾಡಿಗಾಗಿ ಹಲುಬುತ್ತಿದ್ದರೆ. ಕವಿಯು ಸ್ವಾರ್ಥದ ಹೊದಿಕೆಯೊಳಗದೆ "ಹಣ್ಣಿನೊಳು ಉಳುವಂತೆ ಹದುಳದಿಂದಿರು" ಎಂದು ಉಪದೇಶಿಸುತ್ತಿದ್ದಾನೆ. ಆದರೆ

'ಅಮ್ಮ ನಾಡೇ ಎಂದು, ಅಮ್ಮ ನಾಡೇ ಎಂದು

ಸತತವಳುವೆನ್ನಾತ ಹಗುರಪ್ಪುದೆಂದೋ' ಎಂದು ಅಳಲಿಡುತ್ತಾರೆ.

ಇದೇ ಅವಧಿಯಲ್ಲಿ ಅಂದರೆ "ಶಾರಾದಯಾಮಿನಿ" ಸಂಕಲನದಲ್ಲಿ ಅವರು ಉತ್ಸಾಹ, ಉಲ್ಲಾಸಗಳೇ ಸ್ಥಾಯಿಯಾದ, ನಾದ ಭಕ್ತಿಯೇ ವಸ್ತುವಾದ ಹೊಸನಾಡನ್ನು ಕಟ್ಟುವ ಆಸಕ್ತಿ ತೋರಿಸುವ ಕೆಲವು, ಹಾಡುಗಳನ್ನು ಬರೆದಿದ್ದಾರೆ. 'ನವ ಭಾರತ ತರುಣರಾವು', 'ಪಯಣಿಗರ ಹಾಡು', 'ಹೊಸ ಹಾಡು' ಮತ್ತು ಸೈನಿಕರ ಹಾಡು' ಈ ಗುಂಪಿಗೆ ಸೇರುತ್ತವೆ. ನಾಟಕಗಳಾಚೆಗಿನ ಪು.ತಿ.ನ ಕವಿತೆಗಳಲ್ಲಿ ಬಹಳ ಅಪರೂಪವಾದ, ಚಿಂತನೆಗಿಂತ ಹೆಚ್ಚಾಗಿ ಆವೇಶಕ್ಕೆ ಎಡೆಕೊಡುವ ಉತ್ಸಾಹ, ಉಲ್ಲಾಸಗಳ ಲಯವನ್ನು ಇಲ್ಲಿ ಗುರುತಿಸಬಹುದು.

ಸ್ವಾತಂತ್ರ್ಯ ಹೋರಾಟದ ಆಗು ಹೋಗುಗಳನ್ನು ಕುರಿತ ನಂತರದ ಉತ್ಸಾಹ "ರಸ ಸರಸ್ವತಿಯಲ್ಲಿ" ಪ್ರಕಟವಾಗಿವೆ. ಇಲ್ಲಿ ಮೊದಲಿನ ಉತ್ಸಾಹದ ಬದಲು ವಿಷಾದ ಆವರಿಸಿದೆ. ಬಿಡುಗಡೆಯ ಸಂಗಡವೇ ನಡೆದ ಕೋಮುಗಲಭೆ ಹಾಗೂ ನಂತರದ ಜಡ ಸ್ಥಿತಿಗಳೆರಡೂ ಕವಿಮನೋಮಯವನ್ನು ಕಲಕಿದೆ ಗಾಂಧಿಯ ಬಗೆಗಿನ ಅಭಿಮಾನ ಉಳಿದೆಲ್ಲುದರ ಬಗೆಗಿನ ಭ್ರಮೆ ನಿರಸನದೊಂದಿಗೆ ವೈದೃಶ್ಯವನ್ನು ಪಡೆದಿದೆ. 'ನಾಡಿನಾಳ್ಕರೆ", 'ಗಾಂಧೀಸ್ತವ', 'ಸ್ವಾತಂತ್ರ್ಯ ದೇವಿಗೆ', 'ಜಯನವಭಾರತ' ಕವನಗಳಲ್ಲಿ ಗಂಭೀರತೆಯ ದಾಟಿಯಿದ್ದರೆ. ೧೯೬೨ರಲ್ಲಿ ಆಗಬಹುದಾದ ಗಣರಾಜ್ಯೋತ್ಸವದ ಬಗ್ಗೆ ೧೯೫೩ರಲ್ಲಿ ಬರೆದಿರುವ 'ಈ ತಿಂಗಳೂ ಜನವರಿ' ಪದ್ಯದಲ್ಲಿ ಭವಿಷ್ಯವನ್ನು ಕುರಿತ ಕಟು ವಿಡಂಬನೆಯಿದೆ 'ಪರ ಶಿಶಿರ ಶೈತ್ಯ'ವನ್ನು 'ಋಷಿ ತೇಜ ದುಷ್ಣ' ದಿಂದ ಹೋಗಲಾಡಿಸಿಕೊಂಡು ತಾಯ್ನೆಲವು ಬದುಕಬೇಕೆಂಬ ಸೂಚನೆಯನ್ನು ಅಲ್ಲೇ ನೀಡಲಾಗಿದೆ.

ಅಹಿಂಸೆಯ ಮೌಲ್ಯದಲ್ಲಿ ಅಷ್ಟೊಂದು ನಂಬಿಕೆಯಿಲ್ಲದಂತಿದ್ದ ಕವಿ 'ವೀರೋತ್ಸವ ಭೇರಿಯೋಧರ ಹಾಡು' ಮಾಲೆ ಹಾಕಿ, 'ರವಿ ನೆಲಕಿದೆಕೋ ಕೆನ್ನೀರಿನ ಕೊಡುಗೆ' ಮುಂತಾದ ತಲೆ ಬರಹಗಳೇ ಹೇಳುವಂತೆ ಪರಾಕ್ರಮ ಪಕ್ಷಪಾತರಾಗುತ್ತಾರೆ.

ರಾಜಕೀಯ ಬಿಡುಗಡೆಯ ಸಂಗಡವೇ ಸಾಂಸ್ಕೃತಿಕ ದಾಸ್ಯದಿಂದ ಅದರಲ್ಲೂ ಇಂಗ್ಲೀಷಿನ ಹಿಡಿತದಿಂದ ಬಿಡುಗಡೆ ಸಿಕ್ಕಿಲ್ಲವೆನ್ನುವುದೂ ಅವರ ವಿಷಾದಕ್ಕೆ ಕಾರಣವಾಗಿದೆ. ದಿನ ಕಳೆದಂತೆ ಅದರ ತೀವ್ರತೆ ಹೆಚ್ಚಿದೆ. ಕವಿತಾ ಗುಣವಿಲ್ಲದ ಚಿಂತನೆಗಳಲ್ಲಿ ಇದನ್ನು ತೋಡಿಕೊಂಡಿದ್ದಾರೆ. 'ನೂರು ಹರೆಯದ ವಿಶ್ವ ವಿದ್ಯಾಲಯ' ನಾಡಿನ ಪಾಡು, ನಾಡು-ನುಡಿ ವಿಜ್ಞಾನಿಗೆ ಇಂಥ ಹಲವು ಕವಿತೆಗಳಲ್ಲಿ ಈ ರೀತಿಯ ಅಳಲುಗಳನ್ನು ನೋಡಬಹುದು.

ಪು.ತಿ.ನ ಅವರು ಭಕ್ತಿ ಗೀತೆಗಳನ್ನು, ಪ್ರಕೃತಿ ಗೀತೆಗಳನ್ನು ಹೆಚ್ಚು ಬರೆದಿರುವುದಾದರೂ ನಾಡು-ನುಡಿಗೆ ಸಂಬಂಧಿಸಿದ ಹಲವಾರು ಕವಿತೆಗಳನ್ನು ಬರೆದಿದ್ದಾರೆ. ಅವರ ನಾಡು-ನುಡಿಯ ಅಭಿಮಾನ ಒಂದು ರೀತಿಯಲ್ಲಿ ಶಾಂತ ಚಿತ್ತದಿಂದ ಹೇಳಿರುವುದೇ ಹೊರತು ಅತಿಯಾದ ಭಾವೋದ್ವೇಗಕ್ಕೆ ಅವರು ಒಳಗಾಗುವುದಿಲ್ಲ ಎನಿಸುತ್ತದೆ.

---

೧. ಕಾವ್ಯದ ಹುರುಳು ಎಂ. ಅಕಬರ ಅಲಿ ಪುಟ ೪೩

೨. ಯದುಗಿರಿ

೩. ಹಾಡೇ ಹಾದಿಯ ತೋರಿತು ೧೮೪

೪. ಅದೇ. ೧೮೯

# ಅಧ್ಯಾಯ ೭

## ತೌಲನಿಕ ಅಧ್ಯಯನ

"ತೌಲನಿಕ ಅಧ್ಯಯನವೆಂದರೆ ಎರಡು ಸಿದ್ಧ ಕೃತಿಗಳ ಸಾಮ್ಯ ವೈಷಮ್ಯಗಳನ್ನು ಯಾಂತ್ರಿಕವಾಗಿ ತೋರ್ಪಡಿಸುವುದೆಂದೇ ತಪ್ಪು ತಿಳುವಳಿಕೆಯಲ್ಲಿ ನಾವು ಇದ್ದೇವೆ. ವಿಸ್ತಾರ ಹಿನ್ನೆಲೆಯಲ್ಲಿ ಕವನದ ಅರ್ಥಗ್ರಹಣವೇ ತೌಲನಿಕ ವಿಮರ್ಶೆ".[೧]

ಈ ಸಾಧನಗಳಲ್ಲಿ ಕವಿಯ ಬಾಲ್ಯ, ಚಾರಿತ್ರಿಕ ಸಂದರ್ಭ, ಆಗಿನ ಸಾಂಸ್ಕೃತಿಕ ಹಿನ್ನೆಲೆ ಮುಂತಾದವುಗಳಲ್ಲಿ ಮುಖ್ಯವಾಗುತ್ತದೆ. ಇವುಗಳು ಸಾಹಿತಿಯ ಬಾಹ್ಯ ಪರಿಸರವಾದರೆ, ಸಾಹಿತ್ಯ ಕೃತಿಯ ಒಳಲೋಕದ ತುಡಿತಗಳನ್ನು ಸಾಹಿತ್ಯೇತರ ಜ್ಞಾನ ನೆಲೆಗಳ ಮೂಲಕ ಅರಿಯುವ, ಅರ್ಥೈಸುವ ಸಾಧನೆಗಳನ್ನು ತೌಲನಿಕ ಅಧ್ಯಯನಕ್ಕೆ ಸಿದ್ದಗೊಳಿಸಿಕೊಳ್ಳಬೇಕಾಗುತ್ತದೆ.

ಕುವೆಂಪು, ಬೇಂದ್ರೆ, ಪು.ತಿ.ನ ರಲ್ಲಿ ನಾಡು–ನುಡಿ ಕವಿತೆಗಳು ಇತರೆ ಕವಿತೆಗಳಿಗಿಂತ ಸರಳ ನೇರವಾಗಿದ್ದು, ಅಪಾರ ಜನಪ್ರಿಯತೆಗೆ ಕಾರಣವಾಗಿದೆ. ಅವು ಅರ್ಥಕ್ಲೇಶದ ಸುಳಿವೂ ಇಲ್ಲದೆ ಓದುಗನ ಭಾವ ಕೇಂದ್ರಕ್ಕೆ ಲಗ್ಗೆ ಹಾಕುತ್ತದೆ. ಅವನಲ್ಲಿ ತಾತ್ಕಾಲಿಕ ಆವೇಶವನ್ನು ಉಂಟುಮಾಡುತ್ತದೆ. ಆದರೆ ತಾನು ಸ್ವಾತಂತ್ರ್ಯ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಲಿಲ್ಲವೆಂಬ ವಿಷಾದ ಪು.ತಿ.ನ ಅವರನ್ನು ಕಾಡಿದಂತೆ ಉಳಿದಿಬ್ಬರನ್ನು ಕಾಡಿಲ್ಲ ಬದಲಾಗಿ ತಾವು ರಚಿಸಿದ ಉಗ್ರ ಕವಿತೆಗಳು ಚಳುವಳಿಯಲ್ಲಿ ತಮ್ಮದೇ ಆದ ಪಾತ್ರವಹಿಸಿದೆ ಎಂಬ ಆತ್ಮತೃಪ್ತಿ ಅವರದು.

ಕುವೆಂಪು ಅವರ 'ದೇಶ ಭಕ್ತನೋರ್ವನಿಗೆ' ಕವಿತೆಯಲ್ಲಿನ ವಿಷಾದ ಮತ್ತು ಆತ್ಮ ನಿಂದನೆಗಳ ಲವಲೇಶವೂ ಇಲ್ಲದ ಧೋರಣೆಯನ್ನು ಪು.ತಿ.ನ ರವರ 'ಸಾಂತ್ವ ವಚನ'ದೊಂದಿಗೆ ಹೋಲಿಸಿದರೆ ಕುವೆಂಪು ಅವರ ನಿಲುವಿನ ವಿಭಿನ್ನತೆ ಸ್ಪಷ್ಟವಾಗುತ್ತದೆ. ಬೇಂದ್ರೆಯವರೂ ತಮ್ಮ 'ನರಬಲಿ' ಕವನದ ಉಗ್ರ ಪ್ರತಿಭಟನೆಯಿಂದ ಸೆರೆವಾಸವನ್ನು ಅನುಭವಿಸಿದ್ದಾರೆ. ಈ ವ್ಯತ್ಯಾಸಕ್ಕೆ ಕವಿತೆಯ ಶಕ್ತಿ ಹಾಗೂ ಸಾಧ್ಯತೆಗಳ ಬಗೆಗಿರುವ ನಂಬಿಕೆ ಅಥವಾ ಅಪನಂಬಿಕೆಯೇ ಕಾರಣ ಕೆಲವು ಅಪರೂಪದ ಕ್ಷಣಗಳಲ್ಲಿ ಸೌಂದರ್ಯೋಪಾಸನೆ ಮತ್ತು ರಾಷ್ಟ್ರಸೇವೆಗಳ ನಡುವೆ ಪರಸ್ಪರ ವಿರೋಧವನ್ನು ಗುರುತಿಸಿ ಆಯ್ಕೆಯ ತಳಮಳವನ್ನು ಅನುಭವಿಸುತ್ತಾರೆ.

ಸ್ವಾತಂತ್ರ್ಯ ಪೂರ್ವ ಸಂದರ್ಭದಲ್ಲಿ ಬೇಂದ್ರೆ, ಕುವೆಂಪು, ತಿಲಕರ ಸಂವೇದನೆಗಳು ಹಾಗೂ ಗಾಂಧಿಯನ್ ರಾಜಕಾರಣದ ಪ್ರಭಾವಕ್ಕೆ ಒಳಗಾಗಿದ್ದರು. "ಕುವೆಂಪು ಅವರಲ್ಲಿ ಸ್ವಾತಂತ್ರ್ಯ

ಹೋರಾಟಕ್ಕೆ ಅಗತ್ಯವಾಗಿದ್ದ ಆವೇಶ, ಧೈರ್ಯ, ಉಜ್ವಲಾದರ್ಶ ಇತ್ಯಾದಿಗಳು ಅಪೂರ್ವವಾದ ರೀತಿಯಲ್ಲಿ ಅಭಿವ್ಯಕ್ತವಾಗಿವೆ".[೨]

ಕುವೆಂಪು ಅವರಂತೆ ಬೇಂದ್ರೆ ಮತ್ತು ಪು.ತಿ.ನ ಸಾಮಾಜಿಕ ಕಾರ್ಯದಲ್ಲಿ ತಮ್ಮನಾಗಲೀ, ತಮ್ಮ ಕವಿತೆಯನ್ನಗಲೀ ಸಂಪೂರ್ಣವಾಗಿ ತೊಡಗಿಸಿಕೊಳ್ಳಲಿಲ್ಲ. ಹಳೆಯ ಮೈಸೂರಿನ ಕೆಲವು ಕನ್ನಡ ಕವಿಗಳಿಗೆ ಸಹಜವಾಗಿದ್ದ ರಾಜಭಕ್ತಿಯ ಅತಿರೇಕದಿಂದ ಕುವೆಂಪು ಮತ್ತು ಪು.ತಿ.ನ ಭಾದಿತರಾಗಿರಲಿಲ್ಲ. ಆದರೆ ಸ್ವಾತಂತ್ರ್ಯ ಚಳುವಳಿಯ ನೇರ ಅನುಭವವನ್ನು ಅವರು ಬೇಂದ್ರೆಯವರಷ್ಟು ತೀವ್ರವಾಗಿ ಪಡೆಯಲಿಲ್ಲ. ಇದು ನಿಜವಾದರೂ ವೈಯುಕ್ತಿಕ ಜೀವನದ ಹಲವು ಪರಿಳಿತಗಳ ನಡುವೆ ಸ್ವಾತಂತ್ರ ಚಳುವಳಿಯಲ್ಲಿ ಭಾಗವಹಿಸುವ ಉಮೇದನ್ನು ಬೇಂದ್ರೆಯವರು ತೋರಿಸಲಿಲ್ಲ. ಆದರೆ ತನ್ನ ಕವಿತೆಯು ರಾಷ್ಟ್ರ ಭಕ್ತಿಯ ಉದ್ದೀಪನ ಮಾಡುವುದರಿಂದ ತಾನು ಕೃತಾರ್ಥನೆಂದು ಅವರು ಭಾವಿಸಿದರು.

ನವೋದಯ ಕಾವ್ಯದ ರತ್ನತ್ರಯರೆಂದೆ ಹೆಸರಾದ ಕುವೆಂಪು, ಬೇಂದ್ರೆ, ಪು.ತಿ.ನ ನಾಡು–ನುಡಿಯ ಬಗ್ಗೆ ಪ್ರೇಮ, ಅಭಿಮಾನ, ಕಾಳಜಿಗಳನ್ನು ವ್ಯಕ್ತಪಡಿಸುವುದರ ಜೊತೆಗೆ ಅದನ್ನು ನಾಡಿನ ಜನತೆಯಲ್ಲೂ ಜಾಗೃತಗೊಳಿಸುವ ಕೆಲಸವನ್ನು ಮಾಡಿದ್ದಾರೆ. ಇವರಲ್ಲಿ ಕುವೆಂಪು ಅವರು ಅಂಥ ರಚನೆಗಳನ್ನು ಸಾಕಷ್ಟು ಮಾಡಿದ್ದಾರೆ. ಬೇಂದ್ರೆಯವರು ಹೆಚ್ಚು ಕಡಿಮೆ ಕುವೆಂಪು ಅವರ ಹತ್ತಿರಕ್ಕೆಯೇ ಬರುತ್ತಾರೆ. ಇವರಿಬ್ಬರಿಗೂ ಹೋಲಿಸಿದರೆ ಪು.ತಿ.ನ ಅವರ ರಚನೆಗಳು ಸಂಖ್ಯೆಯಲ್ಲಿ ಕಡಿಮೆಯಿವೆ ಎನಿಸುತ್ತದೆ.

ನಮ್ಮ ಕವಿಗಳ ಕನ್ನಡ ನಾಡಿನ ಪ್ರೇಮದಲ್ಲಿ ಭಾರತ ದೇಶದ ಬಗೆಗಿನ ಅಭಿಮಾನವೂ ಸೇರಿದೆ. ಕನ್ನಡ ಪ್ರೇಮ ಎಂಬುದು ರಾಷ್ಟ್ರೀಯತ್ವದ ಒಂದು ಅಂಶವಾಗಿ ಮೂಡಿ ಬಂದಿರುವುದನ್ನು ಕಾಣಬಹುದು.

ಕುವೆಂಪು ಅವರು ಭಾರತ ಮಾತೆಯ ತನುಜಾತೆಯಾಗಿ ಕನ್ನಡ ಮಾತೆಯನ್ನು ನೋಡಿದ್ದಾರೆ. ಬೇಂದ್ರೆ ಅವರು ಕನ್ನಡ ಕಂದವ್ವ ಭಾರತ ಮಾತೆಯ ಮಗಳೆಂದು ಭಾವಿಸುತ್ತಾರೆ. ಭರತ ಭೂಮಿಯನ್ನು ತಮ್ಮ ತಾಯಿಯೆಂದು ಕುವೆಂಪು ಭಾವಿಸಿದರೆ, ಬೇಂದ್ರೆಯವರು ಅವರಿಗೆ ಭಾರತ ಮಾತೆಯನ್ನು ಸೇರಿಸಿ ಒಟ್ಟು ಐದು ಜನ ತಾಯಂದಿರೆಂದು ಹೇಳುತ್ತಾರೆ. ಅವರುಗಳೆಂದರೆ ವಿಶ್ವಮಾತೆ, ಭೂಮಾತೆ, ಭರತಮಾತೆ, ಕನ್ನಡ ಮಾತೆ ಜೊತೆಗೆ ಹೆತ್ತ ತಾಯಿ. ಹೀಗೆ ನಾಡನ್ನು ಕುರಿತು ತಾಯಿಯೆಂಬ ಕಲ್ಪನೆಯಲ್ಲಿ ಸಾಮ್ಯತೆಗಳಿದ್ದೂ, ತಾಯಂದಿರ ಸಂಖ್ಯೆಯಲ್ಲಿ ಇಬ್ಬರ ನಡುವೆ ವ್ಯತ್ಯಾಸಗಳಿವೆ.

ಕುವೆಂಪು, ಬೇಂದ್ರೆ, ಪು.ತಿ.ನ ಮೂವರು ತಮ್ಮ ಕವನಗಳಲ್ಲಿ ಸ್ವಾತಂತ್ರ್ಯವನ್ನು ಹೆಣ್ಣಾಗಿ, ದೇವತೆಯಾಗಿ ನೋಡಿದ್ದಾರೆ. ಕುವೆಂಪು ಸ್ವಾತಂತ್ರ್ಯವನ್ನು ಲಕ್ಷ್ಮಿ ಎಂದು ಕರೆದು ಮುಂದೆ 'ತೆಗೆ ತೆಗೆ ಈ ಬಣ್ಣನೆಯನ್ನು' ಎಂದೇಳಿ, ಸ್ವಾತಂತ್ರ್ಯ ಲಕ್ಷ್ಮಿಯನ್ನು 'ಓ ದುರ್ಗಮಾ ದುರ್ಗೆ? ಬಲಿ ಪರಂಪರೆಯಿಂದ ಪೋಷಿತಳ್ ನಿತ್ಯಯಜ್ಞೋದ್ಭವೆ ಮಹಾಕಾಳಿ ನೀನಲ್ತೆ?' ಎಂದು ಆಕೆಯನ್ನು ರೌದ್ರಿಣಿ, ಮಾರಿ, ದುರ್ಗಿ, ಜ್ವಾಲಾಮುಖಿ, ಕಾಳೀಮುಖಿ ಎಂದು ಕರೆದಿದ್ದಾರೆ. ಬೇಂದ್ರೆ ಕೂಡ ಬಿಡುಗಡೆಯನ್ನು ಕಾಳಿ, ರುದ್ರಕಾಳಿ, ಮಹಾಕಾಳಿ, ಪ್ರಳಯಕಾಳಿ ಎಂದು ಕರೆದಿದ್ದಾರೆ. ಅಂದರೆ ಸ್ವಾತಂತ್ರ್ಯಕ್ಕಾಗಿ ಅನೇಕರು ಪ್ರಾಣವನ್ನರ್ಪಿಸಿದ, ಬಲಿಯಾದ ಹಿನ್ನೆಲೆಯಲ್ಲಿ ಹೀಗೆ ಕರೆದಿದ್ದಾರೆ. ಆದರೆ ಕುವೆಂಪು ಅವರಿಗೆ ಸ್ವಾತಂತ್ರ್ಯ ದೇವಿಯು ಕಾಳಿಯಾಗಿ ಕಾಣಲು ಅಂದಿನ ಪರಿಸ್ಥಿತಿಯೆ ಕಾರಣ ಎನಿಸುತ್ತದೆ. ಆಕೆ ದುರ್ಗಿಯಾಗಿದ್ದರೂ ಆಂತರ್ಯದಲ್ಲಿ ಶುಭಂಕರಿ ಎಂಬುದು ಅವರಿಗೆ ತಿಳಿದಿದೆ. ಪು.ತಿ.ನ ಅವರಿಗೂ ಸ್ವಾತಂತ್ರ್ಯ ದೇವಿ ಸೌಮ್ಯತೆಯುಳ್ಳವಳಾದರೂ ಅದನ್ನು ತೊರೆದು ಕಿಡಿಗೆರೆಯುವುದು ತಿಳಿದಿದೆ. ಪು.ತಿ.ನ ಅವರು ಸ್ವಾತಂತ್ರ್ಯ ದೇವಿಯನ್ನು ಪುರಾಣ ಪ್ರತಿಮೆಗಳ ಮೂಲಕ ಕಟ್ಟಿಕೊಡುತ್ತಾರೆ. ಶಿವನ ಹೃದಯವನ್ನು ತುಳಿದು ನರ್ತಿಸುವ ಕಾಳಿಯಂತೆ, ಸಮುದ್ರ ಮಂಥನ ಮಾಡಿದಾಗ ವಿಷವನ್ನು ಮುಂದಿಟ್ಟುಕೊಂಡು ಬಂದ ಅಮೃತದಂತೆ ಎಂದು ಹೋಲಿಸುತ್ತಾರೆ.

ಕನ್ನಡ ನಾಡು–ನುಡಿಗಾಗಿ ಹೋರಾಡುವಂತೆ ಕನ್ನಡಮ್ಮ ಕನ್ನಡಿಗರನ್ನು ಬೇಡಿಕೊಳ್ಳುತ್ತಾಳೆ. ಕುವೆಂಪು ಅವರ ಕವಿತೆಯಲ್ಲಿ 'ಕನ್ನಡಕೆ ಹೋರಾಡು ಕನ್ನಡದ ಕಂದಾ; ಕನ್ನಡವ ಕಾಪಾಡು ನನ್ನ ಆನಂದಾ!' ಎಂದು ಕನ್ನಡಿಗರನ್ನು ಕನ್ನಡಮ್ಮ ದಮ್ಮಯ್ಯ, ಕಂದಯ್ಯ ಎಂದು ನಿವೇದಿಸಿಕೊಳ್ಳುತ್ತಾಳೆ. ಇದನ್ನು ಮರೆತರೆ ನನ್ನನ್ನೇ ಮರೆತಂತೆ ಹಾಗಾಗಿ ಕಲಿಯಾಗಿ ಹೋರಾಡು ಎಂದು ಹುರಿದುಂಬಿಸುತ್ತಾಳೆ.

ಪು.ತಿ.ನ ಅವರಲ್ಲೂ ತಾಯ್ನಾಡು ಕನ್ನಡಿಗರಿಂದ ಕೆಲವರನ್ನು ಅಪೇಕ್ಷಿಸುತ್ತಾಳೆ. ಕಾಣಿಕೆಯಾಗಿ ಬೇಡುತ್ತಾಳೆ. ಪಡೆದದ್ದನ್ನು ಪೊರೆಯುವ, ಜಡತ್ವವನ್ನು ನೀಗಿಕೊಂಡು ಕ್ರಿಯಾಶೀಲರಾಗುವ, ಶತೃವನ್ನು ನಾಶಮಾಡುವ, ಧೈರ್ಯ, ದಕ್ಷತೆ, ಕ್ಷಮತೆ ಇತ್ಯಾದಿ ಗುಣಗಳನ್ನು ಬೆಳೆಸಿಕೊಳ್ಳಿರೆಂದು ಕೇಳಿಕೊಳ್ಳುತ್ತಾಳೆ.

ಆದರೆ ಬೇಂದ್ರೆ ಅವರ ಕನ್ನಡ ತಾಯಿ ಒಮ್ಮೊಮ್ಮೆ ತುಂಬಾ ಕಟುವಾಗುತ್ತಾಳೆ. ಹರಿತವಾದ ಮಾತುಗಳನ್ನಾಡುತ್ತಾಳೆ. 'ಗಂಡಸಾದರೆ ನಿನ್ನ ಬಲಿ ಕೊಡುವೆಯೇನು?' ಎಂದು ಪ್ರಶ್ನಿಸುತ್ತಾಳೆ. ಪು.ತಿ.ನ ಅವರಲ್ಲಿ ಕಂಡುಬರುವ ಸೌಮ್ಯ ಭಾವ, ಧೀನತೆ ಇಲ್ಲಿ ಕಂಡುಬರುವುದಿಲ್ಲ.

ಬೇಂದ್ರೆ ಪರೋಕ್ಷವಾಗಿ ಪ್ರಶ್ನಿಸಿದರೆ, ಕುವೆಂಪು ಕನ್ನಡವನ್ನು ಕೊಲ್ಲುವ ಮುನ್ನ ನನ್ನನ್ನು ಕೊಲ್ಲಿ ಎಂದು ತಮ್ಮನ್ನೆ ಒಳಗು ಮಾಡಿಕೊಳ್ಳುತ್ತಾರೆ.

ನಾಡು-ನುಡಿಯ ಉಳಿವಿಗಾಗಿ ಮಾಡುವ ಹೋರಾಟದಲ್ಲಿ ತರುಣ ಶಕ್ತಿಯ ಪಾಲು ಬಹು ಮುಖ್ಯವೆಂಬುದನ್ನು ಇವರು ಗುರುತಿಸಿದ್ದಾರೆ. 'ತರುಣರಿರ, ಎದ್ದೇಳಿ! ಎಚ್ಚರಗೊಳ್ಳಿ! ಮೂಡಿ!' ಎಂದು ಕುವೆಂಪು ಯುವ ಜನಾಂಗವನ್ನು ಎಚ್ಚರಿಸಿದರೆ, ಪು.ತಿ.ನ 'ನವಭಾರತದಣುಗರಾವು' ಎಂದು ತರುಣರ ಉತ್ಸಾಹಭರಿತ ಕರೆಕೊಡುತ್ತಾರೆ. 'ತಾಯಿ ನೆಲಕೆ ಸೇವೆ ಸಲ್ಲಿಸಿ' ಎಂದು ಬಂದ ಕಷ್ಟ ತಾಳಿರಿ' ಎಂದು ಬೇಂದ್ರೆ ಕರೆಕೊಟ್ಟಿದ್ದಾರೆ.

ಕುವೆಂಪು, ಬೇಂದ್ರೆ, ಪು.ತಿ.ನ ಮೂವರಲ್ಲಿ ಕನ್ನಡ ಭಾಷೆಗೆ ಸಂಬಂಧಿಸಿದಂತೆ ಗಮನಾರ್ಹ ಕವನಗಳನ್ನು, ಹೆಚ್ಚು ಕವನಗಳನ್ನು ರಚಿಸಿದವರು ಕುವೆಂಪು ಅವರೆ. ಉಳಿದವರು ಆ ಕುರಿತು ರಚನೆ ಮಾಡಿರುವರಾದರೂ ಇವರಷ್ಟು ಯಾರು ಮಾಡಿಲ್ಲ.

ಕುವೆಂಪು ಕನ್ನಡಿಗರನ್ನು ಎಚ್ಚರಿಸಲು ಡಿಂಡಿಮವನ್ನು ಬಾರಿಸಿದರೆ, ಬೇಂದ್ರೆಯವರು ತುತ್ತೂರಿ ಊದಿ ಎಚ್ಚರಗೊಳಿಸುತ್ತಾರೆ.

ನಮ್ಮ ಕವಿಗಳು ನಾಡು-ನುಡಿಯನ್ನು ಗೌರವಿಸಿದಂತೆಯೆ ಒಂದು ರಾಷ್ಟ್ರದ ಗೌರವದ ಸಂಕೇತಗಳನ್ನು ಗೌರವಿಸುತ್ತಾರೆ. ರಾಷ್ಟ್ರಧ್ವಜದ ಬಗೆಗಿನ ಪೂಜ್ಯ ಭಾವನೆ ನಮ್ಮ ಕವಿಗಳಿಗಿದೆ.

> "ಜಯ ಜಯ ಜಯ ವಿಜಯೀಭವ, ಹೇ ವೈಜಯಂತಿ !
>
> ನಿನ್ನ ನೆಳಲೋಳೇಳ್ಗೆವಡೆದು ಗೆಲ್ಗೆ ಭುವನ ಶಾಂತಿ !
>
> ಹಾರು, ಏರು, ಓ ಧ್ವಜವೆ",

ಎಂದು ತ್ರಿವರ್ಣ ಕೇತನವನ್ನು ನಾಡಿನ ಚೇತನವಾಗಿ ಕಾಣುತ್ತಾರೆ ಕುವೆಂಪು ಅವರು.

ಬೇಂದ್ರೆಗೆ ನಾಡಗುಡಿ ಎಂದರೆ ಅಪಾರ ಗೌರವವಿದೆ. ಹಾಗಾಗಿ ಕೆಳಗೆ ಬಿದ್ದಿರುವ ನಾಡಗುಡಿಯನ್ನು ಹೆಮ್ಮೆಯಿಂದ ಎತ್ತಿ ಹಿಡಿಯುತ್ತಾರೆ. ನಾಡಗುಡಿಯನ್ನು ಕೈಯಲ್ಲಿ ಹಿಡಿದುಕೊಳ್ಳುವುದು ಒಂದು ರೀತಿಯಲ್ಲಿ ಪೂರ್ವಜರ ಪುಣ್ಯವೆಂದು ಭಾವಿಸುತ್ತಾರೆ ಬೇಂದ್ರೆ ಅವರು. ರಾಷ್ಟ್ರ ಹೂ ಕಮಲದ ಬಗ್ಗೆಯೂ ಬರೆದಿರುವ ಕವನ ತನ್ನದೆ ವಿಶೇಷತೆಯನ್ನೊಂದಿದೆ. ಆ

ಕಮಲಕ್ಕೆ ಅಷ್ಟದಳಗಳಿವೆಂಬುದಾಗಿಯೂ ಆ ಒಂದೊಂದು ದಳವೂ ಒಂದೊಂದು ಶಕ್ತಿಯ ಕುರುಹು ಎಂದು ಕವಿ ಭಾವಿಸುತ್ತಾರೆ.

ಹೀಗೆ ರಾಷ್ಟ್ರಧ್ವಜ, ರಾಷ್ಟ್ರ ಹೂ ಇತ್ಯಾದಿ ರಾಷ್ಟ್ರ ಗೌರವದ ಸಂಕೇತಗಳಿಗೆ ಕವಿಗಳು ಗೌರವ ವ್ಯಕ್ತ ಪಡಿಸುವುದನ್ನು ಕಾಣಬಹುದು.

ದೇಶ ಸ್ವಾತಂತ್ರ್ಯ ಪಡೆದರೂ ದೇಶದ ಸ್ಥಿತಿ ಏನೂ ಸುಧಾರಿಸಿಲ್ಲ. ಆದರಿಂದ ಯಾವುದೇ ಪ್ರಯೋಜನವಾಗಿಲ್ಲ ಎಂಬ ಕೊರಗು ನಮ್ಮ ಕವಿಗಳಿಗೆ ಇದ್ದೇ ಇದೆ.

ಕುವೆಂಪು ಅವರ ಭರತಮಾತೆ– ನನಗೆ ತಿಳಿಯದಂತೆ ಇದೆಂಥ ಮುಕ್ತಿಯೋ, ಅದು ಮುಕ್ತಿಯಂತೆ ಕಾಣುವ ಬಂಧನವೆಂದುಕೊಳ್ಳುತ್ತಾಳೆ. ಸುತ್ತಮುತ್ತಲಿನವರು ಕತ್ತಿಯೆತ್ತಿ ನಿಂತಿರುವುದನ್ನು ಹೇಳಿಕೊಂಡು ವ್ಯಥೆಪಡುತ್ತಾಳೆ.

ಬೇಂದ್ರೆ ಅವರ ಪ್ರಕಾರ ಸ್ವಾತಂತ್ರ್ಯ ಗಳಿಸಾಗಿದ್ದರೂ ಹೋರಾಟ ಇನ್ನು ಮುಗಿದಿಲ್ಲ, ಏಕೆಂದರೆ ನಾವು ಸಾಧಿಸಬೇಕಾದದ್ದು ಇನ್ನೂ ಬಹಳಷ್ಟಿದೆ.

ಪು.ತಿ.ನ ಅವರು ಸ್ವಾತಂತ್ರ್ಯದ ಅನಂತರದ ದೇಶದ ಸ್ಥಿತಿಗೆ ಕುದಿದು 'ತೋರದು ತ್ರಿವರ್ಣಧ್ವಜ ಸತ್ಯ ವಿಶ್ವಾಸಂ ಸಾರುತಿದೆ ಗಾಳಿ ಪಾರದರ್ಶಿಗಳಿಡುವ ನಿಶ್ವಾಸವಂ' ಎಂದು ದುಃಖತಪ್ತರಾಗಿ ನುಡಿದಿದ್ದಾರೆ.

ಏಕೀಕರಣಕ್ಕೆ, ಕನ್ನಡಕ್ಕೆ ಬಾಧಕಗಳು, ಆತಂಕಗಳು ಎದುರಾಗುವಾಗ ಕುವೆಂಪು

"ಎಲ್ಲಾದರೂ ಇರು, ಎಂತಾದರೂ ಇರು,

ಎಂದೆದಿಗೂ ನೀ ಕನ್ನಡವಾಗಿರು"

ಎಂಬ ವಿಶಾಲಭಾವನೆಯಲ್ಲಿ ಸಮಾಧಾನ ತಾಳುತ್ತಾರೆ.

ಕನ್ನಡಿಗರು ದಿಟ್ಟ ಸಂಕಲ್ಪ ಮಾಡದ ಹೊರತು ಈ ಕಾರ್ಯ ಕೈಗೊಡದು ಎಂದು ಭಾವಿಸಿದ ಕುವೆಂಪು ವಾಸ್ತವಕ್ಕೆ ಕನ್ನಡಿ ಹಿಡಿಯುತ್ತಾರೆ. ಆದ್ದರಿಂದಲೇ

"ಕನ್ನಡ ಜನರೆಲ್ಲರ ಮೇಲಾಣೆ

ಕನ್ನಡ ನಾಡೊಂದಾಗದೆ ಮಾಣೆ

ತೊಡು ದೀಕ್ಷೆಯ ! ಇಡು ರಕ್ಷೆಯ !

ಕಂಕಣ ಕಟ್ಟಿಂದೇ !"

ಎಂದು ಪ್ರತಿಜ್ಞಾರೂಢರಾಗಿ, ಇದು ಕನ್ನಡಿಗರಿಗೂ ಸಂಕಲ್ಪವಾಗಬೇಕೆಂದು ಆಶಿಸುತ್ತಾರೆ.

ಅನ್ಯಭಾಷೆಗಳ ಬಗ್ಗೆ ನಮ್ಮ ಕವಿಗಳು ಅಲ್ಲಲ್ಲಿ ಪ್ರಾಸಂಗಿಕವಾಗಿ ಹೇಳಿದರೆ ಹೊರತು ಅನ್ಯ ಭಾಷೆಗಳ ಹೇರಿಕೆಯ ಬಗ್ಗೆ ಅದರಲ್ಲೂ ವಸಾಹತು ಕಾಲಕ್ಕೆ ಸಂಬಂಧಿಸಿದಂತೆ ಉಳಿದ ಕವಿಗಳು ತೀವ್ರವಾಗಿ ಚಿಂತಿಸಿಲ್ಲ ಎನಿಸುತ್ತದೆ. ಈ ಮಾತಿಗೆ ಅಪವಾದವಾಗಿ ನಿಲ್ಲುವವರು ಕುವೆಂಪು ಮಾತ್ರ ಎಂದರೆ ತಪ್ಪಾಗದು.

ಕನ್ನಡ ನಾಡು ಮತ್ತು ನುಡಿಗಳನ್ನು ಕುರಿತು ತೀವ್ರವಾಗಿ ಚಿಂತಿಸಿ, ಅದನ್ನು ವಿವಿಧ ನೆಲೆಗಳಲ್ಲಿ ಕಾವ್ಯಾಭಿವ್ಯಕ್ತಿಗೊಳಿಸಿದ್ದು, ಕುವೆಂಪು ಮಾತ್ರ ಎನ್ನಬಹುದು. ಈ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ಮೇಲೆ ಭಾರತ ಸರ್ಕಾರವು ತ್ರಿಭಾಷಾ ಸೂತ್ರದ ಯುಕ್ತಿಯ ಅಡಿಯಲ್ಲಿ ಅನ್ಯಭಾಷೆಗಳನ್ನು ಹೇರುತ್ತಿದ್ದುದನ್ನು ತೀವ್ರವಾಗಿ ಖಂಡಿಸುತ್ತಾರೆ. ಅವರ ಟೀಕೆಯಲ್ಲಿ ದೈನ್ಯಾವಸ್ಥೆಗೆ ಮುಟ್ಟುತ್ತಿರುವ ಕನ್ನಡದ ವಾಸ್ತವ ಮತ್ತು ಅದರ ಉಳಿವಿನ ಮೂಲಕ ತಮ್ಮ ಅನನ್ಯತೆಯನ್ನು ಕಾಪಾಡಿಕೊಳ್ಳಬೇಕೆಂಬ ಆಶಯ ಸಮರ್ಥವಾಗಿ ವ್ಯಕ್ತವಾಗಿದೆ.

ಸಾಯುತಿದೆ ನಿಮ್ಮ ನುಡಿ ಓ ಕನ್ನಡದ ಕಂದಂದಿರ !

ಎಂದು ಎಚ್ಚರಿಸುತ್ತಾರೆ. ರಾಜನುಡಿಯೊಂದು, ರಾಷ್ಟ್ರನುಡಿಯೊಂದು, ದೇವನುಡಿಯೊಂದು ಎಂದು ಅಣಕಿಸುತ್ತ ತ್ರಿಭಾಷಾ ಸೂತ್ರದ ಹೇರಿಕೆಯನ್ನು ಟೀಕಿಸುತ್ತಾರೆ. ಇದರಿಂದ ಕನ್ನಡಮ್ಮನ ಬೆನ್ನು ಬಳುಕಿ ಬಗ್ಗಿ ಮುರಿಯುತ್ತಿದೆ ಎಂದು ಎಚ್ಚರಿಸುತ್ತಾರೆ, ಕೊರಗುತ್ತಾರೆ. ಇಂಗ್ಲೀಷ್, ಹಿಂದಿ, ಸಂಸ್ಕೃತದ ಬಲವಂತವಾದ ಹೇರಿಕೆಯನ್ನು ಅವರು ಒಪ್ಪುವುದಿಲ್ಲ.

ಅನ್ಯಭಾಷೆಯ ಅಂಧಾನುಕರಣೆಯ ಬಗೆಗೂ ಚುಚ್ಚುತ್ತಾರೆ.

"ಉತ್ತರದ ಕಾಶಿಯಲಿ ಕತ್ತೆ ಮಿಂದೈತರಲು

ದಕ್ಷಿಣದ ದೇಶಕದು ಕುದುರೆಯಹುದೆ ?

ತಾಯಿತ್ತ ಮೊಲೆಹಾಲು ನಿಮ್ಮ ಮೈಗಾಗದಿರೆ

ಹೊತ್ತ ಹೊರೆ ಬಲಕಾರಿ ನೆತ್ತರಹುದೆ !"

ಎಂದು ಕನ್ನಡಿಗರನ್ನು ಚುಚ್ಚಿ ಕೇಳುತ್ತಾರೆ.

ಬೇಂದ್ರೆ ಅವರ ಮನೆಯ ಮಾತು ಮರಾಠಿಯಾಗಿತ್ತು. ಅವರ ಕನ್ನಡ ನುಡಿಯ ಬಗೆಗೆ ಅಭಿಮಾನ ಕಾಳಜಿಯಿಂದ ಬರೆದಿರುವವರಾದರೂ ಕುವೆಂಪು ಅವರಷ್ಟು ತೀವ್ರಕರವಾಗಿ ಬಂದಿಲ್ಲ. ಇದಕ್ಕೆ ಹೋಲಿಸಿದರೆ ಪು.ತಿ.ನ ಅವರ ರಚನೆಗಳಲ್ಲೂ ಅಷ್ಟೆ ಬೇಂದ್ರೆ ಹೋರಾಟದ ಬಗ್ಗೆ, ಐಕ್ಯತೆಯ ಬಗ್ಗೆ ಬಹಳವಾಗಿ ಹೇಳಿರುವುದಾದರೂ ನುಡಿಗೆ ಸಂಬಂಧಿಸಿದಂತೆ, ಅನ್ಯಭಾಷೆಗಳ ಆಕ್ರಮಣಕ್ಕೆ ಸಂಬಂಧಿಸಿದಂತೆ ಕುವೆಂಪು ಅವರಷ್ಟು ತೀವ್ರವಾಗಿ ಸ್ಪಂದಿಸಿದಂತೆ, ವಿಭಿನ್ನ ರೀತಿಯಲ್ಲಿ ಬರೆದಂತೆ ಕಂಡು ಬರುವುದಿಲ್ಲ. ಮತ್ತೆ ಕುವೆಂಪು ಅವರದು ಶಿಷ್ಟ ಭಾಷಾ ಶೈಲಿಯಾದರೆ ಬೇಂದ್ರೆ ಅವರದು ಜಾನಪದ, ಮರಾಠಿ ಭಾಷೆಯಿಂದ ಪ್ರಭಾವಿತರಾದ ಉತ್ತರ ಕರ್ನಾಟದ ಭಾಷಾ ಶೈಲಿಯಿದೆ. ಪು.ತಿ.ನ ಅವರದು ಅಷ್ಟು ಸರಳವಲ್ಲದ ಮತ್ತೊಂದು ಬಾರಿ ಓದಿಸಿಕೊಳ್ಳುವ ಭಾಷೆಯಾಗಿದೆ. ಈ ಮೂವರ ಕವನಗಳಲ್ಲಿ ಕುವೆಂಪು ಅವರ ರಚನೆಗಳು ಬಹಳವಾಗಿದ್ದು, ಹೆಚ್ಚು ಜನಪ್ರಿಯವಾಗಿ, ಹಾಡುಗಳಾಗಿ ಜನರ ನಾಲಗೆಯಲ್ಲಿ ಇಂದಿಗೂ ಜೀವಂತವಾಗಿವೆ. ಜೊತೆಗೆ ಅಷ್ಟೆ ಪ್ರಭಾವಶಾಲಿಯಾದವುಗಳೂ ಆಗಿವೆ.

ಸ್ವಾತಂತ್ರ್ಯ ಚಳುವಳಿ, ಕರ್ನಾಟದ ಏಕೀಕರಣ, ಕನ್ನಡ ಭಾಷೆ ಇವುಗಳನ್ನು ಕುರಿತಾದ ರಚನೆಯ ಸಂದರ್ಭದಲ್ಲಿ ದೇಶದ ಪವಿತ್ರವಾದ ಪ್ರಸಿದ್ಧ ಸ್ಥಳಗಳು, ನಾಡು-ನುಡಿಗಾಗಿ ಹೋರಾಡಿದ ಯೋಧರು, ರಾಷ್ಟ್ರ ನಾಯಕರು, ನಮ್ಮ ಸಂಸ್ಕೃತಿಯ ಶ್ರೀಮಂತಿಕೆ, ಭೌಗೋಳಿಕ ವೈಲಕ್ಷಣಗಳು, ನಮ್ಮ ನಾಡವರುಗಳ ಗುಣಗಾನ ಮುಂತಾದ ರಚನೆಗಳು ಕಂಡು ಬರುತ್ತದೆ.

ಬುದ್ಧ, ಬಸವ, ಪರಮಹಂಸ, ವಿವೇಕಾನಂದ, ಅರವಿಂದ, ಗಾಂಧೀಜಿ ಅವರನ್ನು ಕುರಿತು ರಚನೆಗಳು, ಹಂಪೆ, ಬೇಲೂರು, ಹಳೇಬೀಡು ಮುಂತಾದ ಸ್ಥಳಗಳ ಬಗ್ಗೆ ಹೇಳಿರುವುದು, ಶಾಸನಗಳು, ಮಾಸ್ತಿ ಕಲ್ಲುಗಳು ಮುಂತಾದ ಕಲೆಗಳ ಬಗ್ಗೆ ಹೇಳಿರುವುದು ಈ ದೃಷ್ಟಿಯಿಂದ ಗಮನಾರ್ಹವಾದವುಗಳಾಗಿವೆ.

ನಾಡಿನ ಬಗ್ಗೆ ಬರೆಯುವಾಗ ಪ್ರಾದೇಶಿಕವಾಗಿರುವ ಊರುಗಳ ಬಗ್ಗೆ ಬರೆದಿರುವುದನ್ನು ಗಮನಿಸಬಹುದು. ಇವುಗಳು ಪ್ರಾದೇಶಿಕ ನಾಡಗೀತೆಗಳೆಂದು ಕರೆಯಬಹುದು. ಭಾರತ, ಕರ್ನಾಟಕವಷ್ಟೇ ಅಲ್ಲದೇ ಇತರ ಕಿರಿದಾದ ಭೂಭಾಗಗಳ ಬಗ್ಗೆಯೂ ಪ್ರೀತಿಯಿಂದ ಅಭಿಮಾನದಿಂದ ಬರೆದಿದ್ದಾರೆ. ನಾಡಿನ ಬಗ್ಗೆ ಬರೆಯುವ ಕವಿಗೆ ಪ್ರಾದೇಶಿಕ ನಾಡುಗಳ ಬಗ್ಗೆಯೂ ಪ್ರೀತಿಯಿರುವುದು ಸಹಜ. ಕುವೆಂಪು ಅವರ ಮಲೆನಾಡಿನ ಪ್ರೀತಿ, ಅಭಿಮಾನ, ಬೇಂದ್ರೆಯವರ

ಸಾಧನಕೇರಿಯ ಬಗೆಗಿನ ಅಭಿಮಾನ ಅಂತೆಯೆ ಪು.ತಿ.ನ ಅವರಿಗೆ ಮೇಲುಕೋಟೆ ಯದುಗಿರಿಯ ಬಗೆಗಿನ ಪ್ರೀತಿ, ಅಭಿಮಾನ ಮೂಡಿಬಂದಿದೆ.

ಬೇಂದ್ರೆ ಅವರ ಮನೆಯ ಮಾತು ಮರಾಠಿ. ಪು.ತಿ.ನ ಅವರ ಮನೆಯ ಮಾತು ತಮಿಳು. ಇವರಿಬ್ಬರೂ ಸಮಾಜದ ಪ್ರತಿಷ್ಠಿತ ವರ್ಗದಿಂದ ಬಂದವರು. ಆದರೆ ಕುವೆಂಪು ಸಮಾಜದ ಕೆಳವರ್ಗಕ್ಕೆ ಸೇರಿದವರಾಗಿದ್ದು, ಭಾಷೆಯ ಮೂಲಕ ಸ್ವಾಭಿಮಾನ ತಮ್ಮತನವನ್ನು ಉಳಿಸಿಕೊಳ್ಳಲು, ಪ್ರತಿಷ್ಟಿತ ಶಕ್ತಿಗಳ ವಿರುದ್ಧ ಇವರಿಬ್ಬರಿಗಿಂತ ಹೆಚ್ಚು ಧ್ವನಿ ಎತ್ತಿದ್ದಾರೆ. ಬೇಂದ್ರೆ, ಪು.ತಿ.ನ ಅವರುಗಳೂ ಭಾಷೆಯ ಬಗ್ಗೆ ಬರೆದಿರುವುದಾದರೂ ಇವರಷ್ಟು ತೀವ್ರವಾಗಿ ಸ್ಪಂದಿಸಿಲ್ಲ. ಅಲ್ಲದೆ ಸಂಖ್ಯಾದೃಷ್ಟಿಯಿಂದಲೂ ಕುವೆಂಪು ಅವರ ಕವನಗಳೇ ಹೆಚ್ಚಾಗಿವೆ. ಭಾಷಿಕ, ಸಾಮಾಜಿಕ ಕಾರಣಗಳಿಂದಾಗಿ ಬಹುಶಃ ಕುವೆಂಪು ಅವರ ರಚನೆಗಳು ಹೆಚ್ಚು ಶಕ್ತಿಯುತವಾಗಿ ಬಂದಿವೆ. ತಮ್ಮನ್ನು ಸಂಪೂರ್ಣವಾಗಿ ಅದರಲ್ಲಿ ತೊಡಗಿಸಿಕೊಂಡುಬಿಟ್ಟಿದ್ದಾರೆ.

ವಿಶ್ವಮಾನವ ಸಂದೇಶವನ್ನು ಸಾರುವ ಕವಿ ಕರ್ನಾಟಕ ಏಕೀಕರಣ, ಕನ್ನಡ ಭಾಷೆ ಇವುಗಳ ಬಗೆಗೆ ಮಾತನಾಡುವಾಗ ಅವರ ನಿಲುವುಗಳು ರಾಷ್ಟ್ರೀಯತ್ವಕ್ಕೆ, ಭಾರತೀಯತ್ವಕ್ಕೆ ಎಂದಿಗೂ ವಿರುದ್ಧವಾಗಿ ಬಂದಿಲ್ಲ. ಅವರ ನಾಡು-ನುಡಿಯ ಅಭಿಮಾನ ರಾಷ್ಟ್ರೀಯತ್ವಕ್ಕೆ ಪೂರಕವಾಗಿ ಬಂದಿದೆ. ಏಕೀಕರಣ, ಕನ್ನಡ ನುಡಿ ಬಗ್ಗೆ ಎಷ್ಟು ಅಭಿಮಾನದಿಂದ ಬರೆಯುತ್ತಿದ್ದರೊ ಅಷ್ಟೆ ಅಭಿಮಾನ ಭಾರತ ದೇಶ ಮತ್ತದರ ಸ್ವಾತಂತ್ರ್ಯದ ಬಗ್ಗೆಯೂ ಇದೆ. ಎರಡೂ ಜೊತೆ ಜೊತೆಯಲ್ಲಿಯೆ ಬಂದಿವೆ. ಇದು ಉಳಿದ ಕವಿಗಳಲ್ಲೂ ಕಂಡು ಬರುವಂತದ್ದು. ಒಂದು ನಾಡಿನ ಜನರನ್ನು ಭಾವನಾತ್ಮಕವಾಗಿ ಒಂದುಗೂಡಿಸಲು ಭಾಷೆ ಬಹುಮುಖ್ಯ ಸಾಧನ. ಅಂತಹ ಭಾಷೆಯ ಮೂಲಕ ನಮ್ಮವರೆಲ್ಲರನ್ನು ಒಟ್ಟಾಗಿ ಬೆಸೆಯುವ, ಅಭಿಮಾನ ಬೆಳೆಸಿಕೊಳ್ಳುವಂತೆ ಮೂಡಬಲ್ಲ ಭಾಷಾ ಚಳುವಳಿ ಪ್ರಮುಖವಾದುದಾಗಿದೆ. ಆ ಕಾರಣದಿಂದಾಗಿಯೆ ಸ್ವಾತಂತ್ರ ಚಳುವಳಿ, ಏಕೀಕರಣ ಚಳುವಳಿಗಳ ಜೊತೆಯಲ್ಲಿಯೆ ಭಾಷಾ ಚಳುವಳಿಯೂ ಬಂದಿದೆ. ಎಲ್ಲವೂ ಒಂದಕ್ಕೊಂದು ಪೂರಕವಾಗಿದೆಯೇ ಹೊರತು ವಿರುದ್ಧವಾಗಿಲ್ಲ. ವಿವಿಧತೆಯಲ್ಲಿ ಏಕತೆಯನ್ನೊಂದಿರುವ ನಮ್ಮಲ್ಲಿ ಪರಸ್ಪರ ಸಾಮರಸ್ಯದ ಭಾವವನ್ನು ಬೆಳೆಸುವುದೆ ಪ್ರಮುಖ ಉದ್ದೇಶವಾಗಿದೆ.

---

೧. ಬೇಂದ್ರೆ ಕಾವ್ಯ ಮೀಮಾಂಸೆ ಮುನ್ನುಡಿಯಿಂದ , ಡಾ|| ಶ.ಮೊ. ಪುಣೇಕರ

೨. ಜಿ.ಎಸ್. ಶಿವರುದ್ರಪ್ಪ, ನವೋದಯ ೮೦

# ಅಧ್ಯಾಯ ೮

## ಉಪ ಸಂಹಾರ

'ಭಾರತದ ವಿಕೇಂದ್ರೀಕೃತ ಅಧಿಕಾರ ವ್ಯವಸ್ಥೆಯನ್ನು ಸಮಗ್ರವಾಗಿ ಕೇಂದ್ರೀಕರಣ ಮಾಡಿದ ಬ್ರಿಟಿಷ್ ವಸಾಹತುಶಾಹಿ ಕಾಲವು ಕನ್ನಡ ನಾಡು–ನುಡಿ ಚಿಂತನ ಪರಂಪರೆಯಲ್ಲಿ ಅತ್ಯಂತ ವಿಶಿಷ್ಟ ಘಟ್ಟ. ಭಾರತೀಯ ಸಂದರ್ಭದಲ್ಲೂ ಆಗ ಹೊಸ ಲಕ್ಷಣಗಳು ಅಂಕುರಿಸಿದವು. ಕನ್ನಡ ಸಂಸ್ಕೃತಿಯ ಹಲವು ಕನ್ನಡ ಪರ ವಿಚಾರಗಳ ಸ್ವರೂಪವೂ ಬದಲಾಯಿತು.'

ಭಾರತದಲ್ಲಿ ರಾಷ್ಟ್ರೀಯತೆ ಸಾಹಿತ್ಯದ ನರನಾಡಿಗಳಲ್ಲಿ ಬೆರೆತು ಹೋಗಿದ್ದರೆ, ಪಶ್ಚಿಮದಲ್ಲಿ ರಾಷ್ಟ್ರೀಯತೆಯನ್ನು ಕೆಲವು ಲೇಖಕರು ತೀವ್ರವಾಗಿ ವಿರೋಧಿಸುತ್ತಾರೆ. ರಾಷ್ಟ್ರೀಯತೆಯ ಪರಿಕಲ್ಪನೆಯು ಆಧುನಿಕ ಜಗತ್ತಿನಲ್ಲಿ ಎತ್ತರದ ತ್ಯಾಗ, ಬಲಿದಾನಗಳಿಗೆ ಹಾಗೇಯೆ ಹಿಂದೆಂದೂ ಕಾಣದಿದ್ದ ರಕ್ತಪಾತ, ನರ ಹತ್ಯಾಕಾಂಡಕ್ಕೆ ಕಾರಣವಾಗಿದೆ. ಅಂತರರಾಷ್ಟ್ರೀಯವಾದ, ವಿಶ್ವೈಕ್ಯವೇ ಮನುಕುಲದ ಆದರ್ಶ ಎಂಬುದನ್ನು ವಿವಿಧ ನೆಲೆಗಳಲ್ಲಿ ಇಡೀ ಜಗತ್ತು ಈ ಶತಮಾನದಲ್ಲಿ ಒಪ್ಪಿಕೊಂಡಿತ್ತು. ಆದರೆ ಭಾರತದಲ್ಲಿ ಅಂತರರಾಷ್ಟ್ರೀಯತೆಯ ವಿಶ್ವನಾಗರೀಕತೆಯ ಮೌಲ್ಯಗಳೇ ಅನಾಕರ್ಷವಾಗಿಬಿಟ್ಟಿರುವುದು ಮತ್ತು ಪರಿಕಲ್ಪನೆಯ ತಾತ್ವಿಕ ಜಟಿಲತೆಯ ಸಮಸ್ಯೆಯಾಗಿದೆ.

ಇಲ್ಲಿ 'ರಾಷ್ಟ್ರೀಯತೆ' ಪರಿಕಲ್ಪನೆಯನ್ನು ದೇಶ, ರಾಜ್ಯಗಳೆರಡರ ನೆಲೆಗಳಲ್ಲಿಯೂ ಈ ಅಧ್ಯಯನವು ಗ್ರಹಿಸಿದೆ. ಕಾವ್ಯದ ಆಚೆ ವಸಾಹತು ಸನ್ನಿವೇಶದಲ್ಲಿ ಈ ರಾಷ್ಟ್ರೀಯತೆಯ ಉಗಮಕ್ಕೆ ಅನೇಕ ಸಂಕೀರ್ಣ ಮುಖಗಳಿವೆ. ಭಾರತದಲ್ಲಿಯಂತೂ ರಾಷ್ಟ್ರೀಯತೆಯ ಉಗಮದ ಹಿಂದಿನ ಪ್ರಧಾನ ಪ್ರೇರಣೆ ಪಾಶ್ಚಾತ್ಯ ಸಂಸ್ಕೃತಿಯ ಹಾಗೂ ರಾಷ್ಟ್ರೀಯ ಪ್ರಭುತ್ವ ಸಂಪರ್ಕ. ಇಲ್ಲಿ ಶತೃವಿನ ಜೊತೆ ಹೋರಾಡುವಾಗ ಕೂಡ ಅವರಿಂದಲೇ ಕಲಿತ ಅಂತರಂಗೀಕರಿಸಿಕೊಂಡ ಪರಿಕಲ್ಪನೆಗಳ ಗ್ರಹಿಕೆಗಳ ಬಳಕೆಯಾಗುತ್ತದೆ. (ಕುವೆಂಪು ಕಾವ್ಯದಲ್ಲಿ ಇಂತಹ ಅಂಶಗಳನ್ನು ಪರಿಶೀಲಿಸಬಹುದಾಗಿದೆ.) ಈ ಅಂಶದ ಬಗ್ಗೆ ಇನ್ನೂ ಹೆಚ್ಚು ಸೂಕ್ಷ್ಮವಾದ, ಸಂಕೀರ್ಣವಾದ ಚರ್ಚೆ ನಡೆಯಬೇಕಾಗಿದೆ" ಎಂಬ ಡಿ.ಆರ್. ನಾಗರಾಜರ ನಿಲುವು ನಮ್ಮ ರಾಷ್ಟ್ರೀಯತೆಯ ಚಿಂತನೆಯ ಹೊಸ ರೂಪಗಳನ್ನು ಶೋಧಿಸುವ ಸವಾಲನ್ನು ನಮ್ಮ ಮುಂದಿಡುತ್ತದೆ. ಅವರೇ ಗುರುತಿಸುವ ಹಾಗೆ ಭಾರತೀಯ ನವೋದಯ ಸನ್ನಿವೇಶದಲ್ಲಿ ಕಲ್ಪಿತವಾದ ರಾಷ್ಟ್ರೀಯತೆಯ ಪರಿಕಲ್ಪನೆಯಲ್ಲಿ ದೇಸಿಸತ್ವ ರೂಪಗಳನ್ನು ಮೀರುವ ಪರಕೀಯ ಆದರ್ಶ ಮೌಲ್ಯಗಳಿರುವುದು. ಇದರಿಂದ ಉಂಟಾದ ಮಹತ್ವದ ವ್ಯತ್ಯಾಸಗಳೆಲ್ಲ ಗಾಂಧಿ ಚಿಂತಿಸಿದ, ಕಲ್ಪಿಸಿದ ಮತ್ತು ಹಿಂದೂ ರಾಷ್ಟ್ರೀಯವಾದಿಗಳು ಕಲ್ಪಿಸಿದ ರಾಷ್ಟ್ರದ ಸತ್ವ ಮತ್ತು ರೂಪ ಬೇರೆ. ಈ ಎರಡೂ ರಾಷ್ಟ್ರ ದರ್ಶನಗಳು ಹೊರಡುವ

ನೆಲೆಗಳೂ ತಲುಪುವ ಗುರಿಗಳೂ ಬೇರೆಯಾಗಿವೆ. ವೀರ್ಯವತ್ತಾದ ಭಾರತದ ಕಲ್ಪನೆಯಿಂದ ಅಹಿಂಸೆಯನ್ನು ಭಾರತೀಯ ಪರಮ ಮೌಲ್ಯ ಎನ್ನುವುದನ್ನು ಒಪ್ಪದ ಹಿಂದೂ ರಾಷ್ಟ್ರೀಯವಾದಿಗಳು ಒಂದು ಕಡೆಯಾದರೆ, ಗಾಂಧೀ ಕಲ್ಪಿತ ರಾಷ್ಟ್ರೀಯತೆಯಲ್ಲಿ ಅಹಿಂಸೆ ಎನ್ನುವುದು ಶ್ರೇಷ್ಠ ಮೌಲ್ಯವಾಗುತ್ತದೆ. ಕುವೆಂಪು, ಬೇಂದ್ರೆಯವರಲ್ಲಿ ಈ ಬಗೆಯ ದ್ವಂದ್ವವನ್ನು ಗಮನಿಸಬಹುದಾಗಿದೆ.

ಆಧುನಿಕ ಕನ್ನಡ ಸಾಹಿತ್ಯದ ಹಿಂದೆ ಇರುವ ಸೈದ್ಧಾಂತಿಕ ವಿಸ್ತಾರಗಳಲ್ಲಿ ರಾಷ್ಟ್ರೀಯತೆ ಕೂಡ ಒಂದು. ಆಧುನಿಕ ಘಟ್ಟಕ್ಕಿಂತ ಹಿಂದೆ ಕನ್ನಡ ಸಾಹಿತ್ಯದಲ್ಲಿ ಪ್ರಧಾನ ಅನುಭವ ಎಂದರೆ ವ್ಯಕ್ತಿಯ ಆಧ್ಯಾತ್ಮಿಕ ವಿಧಿ ಅಥವಾ ಗತಿ. ಈ ಪರಿಭಾಷೆಯೊಳಗೇ ಉಳಿದ ವಲಯಗಳು ಬೆರತು ಹೋಗುತ್ತಿದ್ದವು ಆದರೆ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಒಟ್ಟು ನಾಡಿನ ಗತಿಯ ಸಾಮಾಜಿಕತೆಯ ಪ್ರಶ್ನೆ ಅತ್ಯಂತ ದೊಡ್ಡ ಆಶಯವಾಗಿ ಬೆಳೆಯಿತು. ಇದರೊಳಗೆ ವ್ಯಕ್ತಿಗತಿಯ, ವಿಧಿಯ ಪ್ರಶ್ನೆಗಳೂ ಬೆರೆತು ಹೋದವು. ಈ ಸಾಮಾಜಿಕತೆಯ ವಸ್ತು ಪ್ರಕಟವಾಗುವುದು ಒಂದು ಸಂಸ್ಕೃತಿಯ ಅಂತರಶೋಧದಲ್ಲಿ. ಯಾವುದೇ ರಾಷ್ಟ್ರದ ರಾಷ್ಟ್ರೀಯತೆಯ ಪರಿಕಲ್ಪನೆಗಳ ಅಂತರ್ಗತ ಅಂಶ ಎಂದರೆ ಸಂಸ್ಕೃತಿಯ ಅಂತರ್ಶೋಧದ ಆಯಾಮ.

ಪ್ರಗತಿಪರತೆ ಸಾಮಾಜಿಕ, ರಾಜಕೀಯ ವಲಯಗಳೆರಡರಲ್ಲೂ ಪ್ರಖರವಾಗಿ ಹಬ್ಬಿರುವ ಪ್ರಕರಣಗಳು ಕನ್ನಡ ನವೋದಯ ಸಾಹಿತ್ಯಕ ಸಂಸ್ಕೃತಿಯಲ್ಲಿ ಅಷ್ಟು ವ್ಯಾಪಕ ಸಂಖ್ಯೆಯಲ್ಲಿಲ್ಲ ಎನ್ನಬಹುದು. "ಕನ್ನಡ ಕಾವ್ಯ ತನ್ನ ಅತ್ಯುತ್ತಮ ಕ್ಷಣಗಳಲ್ಲಿ ರಾಷ್ಟ್ರೀಯತೆಯ ಮಿತಿಗಳನ್ನು ದಾಟಿ ಅಂತರರಾಷ್ಟ್ರೀಯ ಮೌಲ್ಯ ಪ್ರಜ್ಞೆಯನ್ನು ಪ್ರಕಟಿಸಿದೆ. ಕುವೆಂಪು ಅವರ ಅನಿಕೇತನ ಅದರ ಒಂದು ಮುಖ. ಬೇಂದ್ರೆಯವರ ನರಬಲಿ ಅದರ ಇನ್ನೊಂದು ಮುಖ".[೧]

ರಾಷ್ಟ್ರೀಯತೆ ಎನ್ನುವ ಹೊಸ ಸೈದ್ಧಾಂತಿಕ ವಿಸ್ತಾರ ಸಾಹಿತ್ಯ ಸಂಸ್ಕೃತಿಯೊಂದರಲ್ಲಿ ಸೃಷ್ಟಿಸುವ ವೈವಿಧ್ಯಮಯ ಗ್ರಹಿಕೆಗಳ, ವೈರುಧ್ಯಗಳ ಅಧ್ಯಯನಕ್ಕೆ ಆಧುನಿಕ ಕನ್ನಡ ಸಾಹಿತ್ಯ ಫಲವತ್ತಾದ ಕ್ಷೇತ್ರವನ್ನು ಒದಗಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನವು ವಸಾಹತು ಸಂದರ್ಭದ ಒತ್ತಡಗಳ ನಡುವಿನ ಕುವೆಂಪು, ಬೇಂದ್ರೆ, ಪು.ತಿ.ನ. ಕಾವ್ಯಗಳ ನಾಡು-ನುಡಿಗಳ ಚಿಂತನೆಯ ನೆಲೆಗಳನ್ನು ಸ್ಥೂಲ ಗ್ರಹಿಕೆಗೊಳಪಡಿಸಿದೆ.

ಅಧ್ಯಯನದ ಮೊದಲ ಹಂತದಲ್ಲಿ ಆದಿ ಕವಿಯೇ ಆದಿಮವಾಗಿ ಕೆಲವು ಪ್ರಮುಖವೆನಿಸುವ ಕವಿಗಳ ಕೃತಿಗಳಲ್ಲಿ ವ್ಯಕ್ತವಾಗಿರುವ ನಾಡು-ನುಡಿ ಚಿಂತನೆಯ ಸ್ವರೂಪವನ್ನು ಕುರಿತು ಚರ್ಚಿಸಲಾಗಿದೆ. ಪ್ರಕೃತಿಯ ಸೌಂದರ್ಯಾತ್ಮಕತೆ ಮತ್ತು ಕ್ಷಾತ್ರೀಯ ಗುಣಗಳು ಪಂಪಾದಿಗಳ ನಾಡಿನ ಅಭಿಮಾನಸ್ಫುರಣೆಯ ಮುಖ್ಯ ನೆಲೆಗಳಾದರೆ, ವಚನಕಾರರ ಪ್ರಜ್ಞೆ ವಿಶಿಷ್ಟವಾಗಿದ್ದು,

ಆಂತರಂಗಿಕ ಶ್ರೇಷ್ಠ ಮೌಲ್ಯಗಳನ್ನು ಕನ್ನಡ, ಕರ್ನಾಟಕವಾಗಿ ಕಟ್ಟುತ್ತಾರೆ. ಅನಂತರ ಹರಿಹರ, ನಂಜುಂಡ, ಮಹಲಿಂಗರಂಗ ಮತ್ತು ಮುದ್ದಣ ಇವರು ಕ್ರಮವಾಗಿ ನಾಡು-ನುಡಿ ಪರ, ನಾಡಿನ ಪರ, ನುಡಿಯ ಪರ ಒಲವನ್ನು ಪ್ರಧಾನವಾಗಿ ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ. ವಸಾಹತು ಘಟ್ಟದಲ್ಲಿ ರಾಷ್ಟ್ರೀಯ ಚಳವಳಿ ಹಾಗು ಏಕೀಕರಣ ಚಳವಳಿಗಳು ಸಾಂಸ್ಕೃತಿಕ, ಸಾಹಿತ್ಯಿಕ ಪ್ರತಿಕ್ರಿಯೆಗಳನ್ನು ಆಗ ಮಾಡಿದ ಸಂದರ್ಭ ನವೋದಯ ಕಾವ್ಯದ ನಾಡು ಚಿಂತನೆಯನ್ನು ಶಾಂತಕವಿ, ಬಿ.ಎಂ.ಶ್ರೀಯವರನ್ನು ಚರ್ಚೆಯ ನೆಲೆಯಲ್ಲಿಟ್ಟು ಸ್ಥೂಲವಾಗಿ ಗ್ರಹಿಸಲಾಗಿದೆ. ಇಲ್ಲಿನ ಕಾವ್ಯಾತ್ಮಕ ಪತಿಕ್ರಿಯೆಗಳ ಹಿಂದಿನ ಸ್ವಾತಂತ್ರ್ಯದ ಮತ್ತು ಏಕೀಕರಣದ ನೆಲೆ, ಸ್ವರೂಪಗಳನ್ನು ವಿಷಯಾಧಿಕ್ಯದ ಭಯದಿಂದ ಚರ್ಚಿಸಲಾಗಿಲ್ಲ.

ನವೋದಯ ಕಾವ್ಯದ ಶ್ರೇಷ್ಠತ್ರಯರಾದ ಕುವೆಂಪು, ಬೇಂದ್ರೆ, ಪು.ತಿ.ನ. ಸೃಜನಶೀಲ ಪ್ರಕ್ರಿಯೆಯನ್ನು ರೂಪಿಸಿದ ವೈಯುಕ್ತಿಕ ಹಿನ್ನಲೆಯನ್ನು ಅವರ ಸಾಹಿತ್ಯಕ ಚೌಕಟ್ಟಿನಲ್ಲಿ ವಿವರಿಸಲಾಗಿದೆ. ಒಂದೆ ನೆಲದಲ್ಲಿ ಅರಳಿದ ಪುಷ್ಪಗಳ ಅನನ್ಯತೆಯ ಹಿಂದಿನ ಪರಿಸರವನ್ನು ಚರ್ಚಿಸಲಾಗಿದೆ. ತನ್ನ ಮೂಲ ಚೈತನ್ಯವೆ ಪ್ರಾಕೃತಿಕ ಸ್ವರೂಪ ಪಡೆದಂತೆ ಅದರ ಸಾನಿಧ್ಯದಲ್ಲಿ ಏಕಾಂಗಿಯಾಗುವ ಕುವೆಂಪು, ಭಾವಗೀತಾತ್ಮಕ ಪ್ರತಿಭೆಯ ಜನರ ಮಧ್ಯೆ ಒಡನಾಡಿದ ಬೇಂದ್ರೆಯವರ ಜೀವನ, ಸರ್ವ ಸದಾ ಏಕಾಂಗಿಯಾಗಿರುವ ಪು.ತಿ.ನ.ರ ವ್ಯಕ್ತಿತ್ವದ ಹಿನ್ನಲೆಯನ್ನು ಅರ್ಥೈಸಿಕೊಳ್ಳುವ ಪ್ರಯತ್ನ ಇದಾಗಿದೆ.

ಈಗಾಗಲೇ ವಿಸ್ತೃತ ಅಧ್ಯನಕ್ಕೊಳಗಾಗಿರುವ ನವೋದಯ ಕಾವ್ಯದ ಪ್ರೇರಣೆ ಲಕ್ಷಣಗಳನ್ನು ಚರ್ಚಿಸುವುದಕ್ಕೆ ಪರ್ಯಾಯವಾಗಿ ನವೋದಯ ಕಾವ್ಯದ ಪ್ರಧಾನ ಲಕ್ಷಣಗಳಾದ ಪ್ರಕೃತಿ, ಮಾನವ ಸಂಬಂಧ, ಸಮಾಜ, ಧರ್ಮ, ನಾಡು-ನುಡಿ, ಚಿಂತನೆ, ಪ್ರಣಯ ಮುಂತಾದವುಗಳು ಪ್ರಸ್ತುತ ಕವಿಗಳ ಕಾವ್ಯದಲ್ಲಿ ವ್ಯಕ್ತವಾಗಿರುವ ಬಗೆಯನ್ನು, ಅವರ ಹಿಂದಿನ ಚಿಂತನೆ, ಆಶಯಗಳ ನೆಲೆಯಲ್ಲಿ ಚರ್ಚಿಸಲಾಗಿದೆ. ನಿದರ್ಶನವಾಗಿ, ದಾಂಪತ್ಯವನ್ನು ಪ್ರೇಮ ಕಾಶ್ಮೀರದ ಒಂದು ವಿಸ್ತರಣವನ್ನಾಗಿ ಕುವೆಂಪು ನೋಡಿದರೆ, ದಾಂಪತ್ಯ ಬಗೆಗಿನ ತಮ್ಮ ನಿಲುವುಗಳನ್ನು ನಾಟಕೀಕರಿಸಿ ಅನ್ಯಪಾತ್ರಗಳಲ್ಲಿ ಮಾತ್ರ ಪು.ತಿ.ನ. ಸೃಷ್ಟಿಸುತ್ತಾರೆ. ಬೇಂದ್ರೆಯವರು ದಾಂಪತ್ಯದ ಸಿಹಿ-ಕಹಿಗಳಿಗೆ ಕನ್ನಡಿಯಾದ ಕವಿತೆಯನ್ನು ಕಟ್ಟುವ ಮೂಲಕ ಎಲ್ಲ ಕಾಲದ ದಾಂಪತ್ಯಕ್ಕೂ ಪ್ರತಿಮೆಗಳನ್ನು ನಿರ್ಮಿಸುತ್ತಾರೆ.

ನಂತರದ ಅಧ್ಯಾಯಗಳಲ್ಲಿ ಕ್ರಮವಾಗಿ ಕುವೆಂಪು, ಬೇಂದ್ರೆ, ಪು.ತಿ.ನ. ಕಾವ್ಯದಲ್ಲಿ ನಾಡು-ನುಡಿ ಚಿಂತನೆಯ ಸ್ವರೂಪವನ್ನು ಹಲವು ಪ್ರಮುಖ ಗಮನಾರ್ಹ ಕವಿತೆಗಳ ಚರ್ಚೆಯ ಮೂಲಕ ವಿಶದೀಕರಿಸಲಾಗಿದೆ. ಕೆಲವು ಕವಿತೆಗಳು ಅಧ್ಯಯನದ ಕಣ್ತಪ್ಪಿ ಹೋಗಿರುವ ಸಾಧ್ಯತೆಯೂ ಇದೆ.

ಅಲ್ಲದೆ ನಾಡು–ನುಡಿಯ ಕುರಿತಾದ ಈ ಅಧ್ಯಯನವೆ ಪೂರ್ಣವಾದುದೆಂದು ಹೇಳಲು ಬರುವುದಿಲ್ಲ. ಅಲ್ಲದೆ ಬೇರೆ ಬೇರೆ ತಾತ್ವಿಕತೆಗಳು ಗ್ರಹಿಕೆಯಲ್ಲಿದ್ದರೂ ಅವೆಲ್ಲವನ್ನು ಸೂಕ್ಷ್ಮವಾಗಿ ಒಳಗೊಂಡ ಈ ಅಧ್ಯಯನವು ವಿವರಣಾತ್ಮಕವಾದುದಾಗಿದೆ.

"ತಮಿಳಿನ ಪೆರಿಯಾರರಂತೆ ಕುವೆಂಪು ರಾಜಕೀಯ ಆಂದೋಲನವೊಂದರ ನೇತಾರರಾಗಿ ಗುರುತಿಸಲ್ಪಡಲಿಲ್ಲ. ಆದರೆ ಕರ್ನಾಟಕದ ಸಮಾಜವಾದಿ ಆಂದೋಲನದ ಸಾಂಸ್ಕೃತಿಕ ಎಚ್ಚರದ ಪ್ರತೀಕವಾಗಿ ಕುವೆಂಪು ಅವರಿರುವುದನ್ನು ಸಮಾಜವಾದಿ ಹೋರಾಟಗಾರಗಾಗಿ ರೂಪುಗೊಂಡ ಅನೇಕ ಖ್ಯಾತನಾಮರ ವ್ಯಕ್ತಿತ್ವಗಳು ಕುವೆಂಪು ಅವರಿಂದ ಪ್ರಭಾವಿತರಾಗಿರುವುದನ್ನು ಖಚಿತವಾಗಿ ಗುರುತಿಸಬಹುದು".[3] ಈ ದೃಷ್ಟಿಯಿಂದ ಅವರು 'ನವ ಕನ್ನಡತ್ವದ ನಿರ್ಮಾಣದ ಆಚಾರ್ಯ ಎಂದು ಗುರುತಾಗುತ್ತಾರೆ.

ಬೇರೊಂದು ನೆಲೆಯಲ್ಲಿ ಬೇಂದ್ರೆ ತನ್ನ ಕವಿತೆಯು ರಾಷ್ಟ್ರ ಭಕ್ತಿಯನ್ನು ಉದ್ದೀಪನ ಮಾಡುವುದರಿಂದ ನಾನು ಕೃತಾರ್ಥನಾಗುವ ಧನ್ಯತೆಯನ್ನು ಅನುಭವಿಸುತ್ತಾರೆ. ತಮ್ಮ ತೀವ್ರ ಕಾಳಜಿ, ಚಿಂತನೆಗಳ ಹೊರತಾಗಿಯೂ ಪು.ತಿ.ನ. ವ್ಯವಸ್ಥೆಯ ನೌಕರನಾಗಿ ಪ್ರತಿಬಂಧಿತವಾದ ವಿಷಾದವನ್ನು ನಿರಂತರವಾಗಿ ಅನುಭವಿಸುತ್ತಾರೆ.

ತೌಲಾನಿಕ ಅಧ್ಯಯನವು ಶ್ರೇಷ್ಠತೆಯ ಅಳತೆಗೋಲನ್ನು ಹಿಡಿದು ಹೊರಡುವ ಉದ್ದೇಶ ಹೊಂದಿರದೆ ವಿಭಿನ್ನ ಪ್ರಾಂತೀಯ ಹಿನ್ನಲೆಗಳಲ್ಲಿ ಮೂವರು ಕವಿಗಳ ಚಿಂತನಾ ಸ್ವರೂಪವು ಕವಿತೆಯಲ್ಲಿ ಮೈದಾಳಿದ ಬಗೆಯನ್ನು ವಿವೇಚಿಸಲಾಗಿದೆ. ಕನ್ನಡವನ್ನು ಒಂದು ಪ್ರಬಲ ಜನತಾಶಕ್ತಿಯಾಗಿಸಲಿಕ್ಕೇ ಕುವೆಂಪು ಮೇಲ್ನೋಟಕ್ಕೆ ಒಂದು ರಾಜಕೀಯ ಪರಿಕಲ್ಪನೆಯಾಗಿ ಕಾಣುವಂತಿದ್ದ ಅಖಂಡ ಕರ್ನಾಟಕ ಪರಿಕಲ್ಪನೆಯನ್ನು ಒಂದು ಸಾಂಸ್ಕೃತಿಕ ಕಲ್ಪನೆಯಾಗಿ ಅರ್ಥೈಸುತ್ತಾರೆ. ವಸಾಹತೀಕರಣದ ಎಲ್ಲ ದುಷ್ಪರಿಣಾಮಗಳನ್ನು ಪು.ತಿ.ನ. ಅವರಷ್ಟು ಖಚಿತವಾಗಿ ಗುರುತಿಸಿ, ವಿರೋಧಿಸಲು ಬೇಂದ್ರೆ, ಕುವೆಂಪು ಅವರಿಗೂ ಸಾಧ್ಯವಾಗಿಲ್ಲವೆಂದೇ ಹೇಳಬೇಕು.

ಪ್ರಾದೇಶಿಕ ಸಂಸ್ಕೃತಿ ಮತ್ತು ರಾಷ್ಟ್ರೀಯ ಸಂಸ್ಕೃತಿಯ ನಡುವೆ ಸಂಭವಿಸಬಹುದಾದ ಮುಖಾಮುಖಿಯ ಸವಾಲನ್ನು ಪ್ರಸ್ತುತ ಕವಿಗಳು ಪರಿಹರಿಸಿಕೊಂಡಿರುವ ವಿಶಿಷ್ಟತೆಯನ್ನು ಗಮನಿಸಲಾಗಿದೆ. ನವೋದಯ ಕಾವ್ಯ ಸಂದರ್ಭದಲ್ಲಿ ಇವು ಒಂದೇ ನಾಣ್ಯದ ಎರಡು ಮುಖಗಳಂತೆ ಪರಿಗಣಿತವಾದವು.

ತಮ್ಮದೇ ಪರಿಮಿತಿಯ ಸಾಂಸ್ಕೃತಿಕ ಘಟಕಗಳನ್ನು ಕರ್ನಾಟಕದಲ್ಲಿ ಒಡಮೂಡಿಸಿ ಕನ್ನಡದ ಪರವಾಗಿ ಒಂದೇ ಸಮನೆ ಹೋರಾಡಿ ಕನ್ನಡ ಪ್ರೇಮವನ್ನು ಒಂದು ಮೌಲ್ಯದ ಮಟ್ಟಕ್ಕೆ ಏರಿಸಿದ ಸಾಧನೆಯನ್ನು ಈ ಕವಿಗಳ ವಿಶೇಷತೆಯಾಗಿ ಗುರುತಿಸಲಾಗಿದೆ.

ಒಟ್ಟಿನಲ್ಲಿ ದೇಶಭಕ್ತಿಯನ್ನು ಕೇಂದ್ರವಾಗಿಟ್ಟುಕೊಂಡ ಭಾವನೆಗಳ ಉದ್ದೀಪನವು ಅಗತ್ಯವಾಗಿದ್ದ ಸಮಯದಲ್ಲಿ ಅಂತಹ ಕೆಲಸವನ್ನು ನೆರವೇರಿಸುವುದರಲ್ಲಿ ತನ್ನ ಪಾತ್ರವೂ ಇದೆಯೆಂದು ತಿಳಿದುಕೊಂಡು ಆ ಹೊಣೆಯನ್ನು ನಿರ್ವಹಿಸಿದ ಅತ್ಯುತ್ತಮ ರೀತಿಯನ್ನು ನವೋದಯ ಕಾವ್ಯದಲ್ಲಿ ಅದರಲ್ಲೂ ಈ ರತ್ನತ್ರಯರಲ್ಲಿ ಗುರುತಿಸಬಹುದು.

ನವೋದಯ ಯುಗದ ನಾಡಿನ ಕವಿಗಳಲ್ಲಿ ಮೈದೊಳಿದ ದೇಶಪ್ರೇಮ, ಭಾಷಾಪ್ರೇಮವನ್ನು ಮುಂದಿನ ಘಟ್ಟಗಳಲ್ಲಿ ಪರಿಶೀಲಿಸಿದರೆ, ಪ್ರಗತಿಶೀಲರಲ್ಲಿ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ರಚನೆಗಳನ್ನು ಕಾಣಬಹುದಾದರೂ, ಭಾಷೆಗೆ ಸಂಬಂಧಿಸಿದಂತೆ ಅಂತಹ ಗಮನಾರ್ಹ ರಚನೆಗಳಾಗಿಲ್ಲ. ನವ್ಯದವರ ಅನೇಕವಾದ, ಏಕಾಕಿತನ, ಅಸಂಗತತೆಗಳ ಮಧ್ಯೆ ನಾಡು–ನುಡಿ ಪ್ರೇಮವನ್ನು ಹುಡುಕುವುದು ಕಷ್ಟವೇ ಆಗಿದೆ. ಒಂದು ವೇಳೆ ಬಂದಿದ್ದರೂ ಸಾಂದರ್ಭಿಕ ಪ್ರಯೋಗಗಳಷ್ಟೆ. ದಲಿತ ಬಂಡಾಯದವರು ತಮ್ಮ ಶೋಷಣೆ, ಆರ್ಭಟ, ಅಬ್ಬರಗಳ ನಡುವೆ ದೇಶ, ಭಾಷೆಯನ್ನು ಕುರಿತು ಬರೆದದ್ದು ನವೋದಯಕ್ಕೆ ಹೋಲಿಸಿದರೆ ಕಡಿಮೆಯೆನ್ನಬಹುದು. ಆದರೂ ಪಾಶ್ಚಾತ್ಯ ಸಾಹಿತ್ಯ ಸಂದರ್ಭಕ್ಕೆ ಹೋಲಿಸಿದರೆ ನಮ್ಮಲ್ಲಿ ಕೂಡ ಇಂತಹ ರಚನೆಗಳು ಕಡಿಮೆ. "ದೀರ್ಘ ದಾಸ್ಯದಲ್ಲಿ ಬಾಳಿ ಕೊನೆಗೆ ಹೋರಾಡಿ ಸ್ವತಂತ್ರವಾದ ಜನರಿಗೆ ಇರಬೇಕಾದ ದೇಶಾಭಿಮಾನ ನಮಗಿಲ್ಲ" [೩] ಎಂಬುದನ್ನು ವಿಷಾದದಿಂದಲೇ ಒಪ್ಪಬೇಕಾಗುತ್ತದೆ.

ಒಟ್ಟಿನಲ್ಲಿ ನಮ್ಮ ನಾಡು–ನುಡಿಗಳ ಕುರಿತ ಅಭಿಮಾನಕ್ಕೆ ಅದರೆಲ್ಲ ಸಂಕೀರ್ಣತೆಗಳಿಗೆ ಮುಖಾಮುಖಿಯಾಗುವ ಚಿಂತನೆಗೆ ಈ ಮೂಲ ಸತ್ವದಲ್ಲಿ ನಿರಂತರ ಹೊಮ್ಮಬೇಕಿರುವ ಸೃಜನಶೀಲ ಪ್ರಕ್ರಿಯೆಗೆ ಮುಕ್ತಾಯವಿಲ್ಲ.

---

೧. ಡಿ.ಆರ್.ನಾಗರಾಜ್ ಸಾಹಿತ್ಯ ಕಥನ.

೨. ನವ ಕನ್ನಡತ್ವ ನಿರ್ಮಾಣದ ಆಚಾರ್ಯ ಕುವೆಂಪು–ಬಂಜೆಗೆರೆ ಜಯಪ್ರಕಾಶ

೩. ಕನ್ನಡದಲ್ಲಿ ಭಾವಗೀತೆ ಡಾ|| ಕೆ. ಪ್ರಭುಶಂಕರ.

# ಗ್ರಂಥ ಋಣ


| | | |
|---|---|---|
| ೧. | ಕುವೆಂಪು ಸಮಗ್ರ ಕಾವ್ಯ ಸಂಪುಟ – ೧, ೨ | ಪ್ರಸಾರಂಗ ಕನ್ನಡ ವಿ.ವಿ ಹಂಪಿ ೨೦೦೦ |
| ೨. | ಅಂಬಿಕಾತನಯದತ್ತರ ಸಮಗ್ರ ಕಾವ್ಯ ದರ್ಶನ ಸಂಪುಟ ೨, ೩ | ವಾಮನ ಬೇಂದ್ರೆ ೨೦೦೩ |
| ೩. | ನವಿಲುಗರಿ | ಪು.ತಿ.ನ |
| ೪. | ರಸಸರಸ್ವತಿ ಮತ್ತು ಇತರ ಕವನಗಳು | ಪು.ತಿ.ನ |
| ೫. | ಮಾಂದಳಿರು | ಪು.ತಿ.ನ |
| ೬. | ಹಣತೆ | ಪು.ತಿ.ನ |
| ೭. | ಶಾರದಯಾಮಿನಿ | ಪು.ತಿ.ನ |
| ೮. | ಕನ್ನಡದಲ್ಲಿ ಭಾವಗೀತೆ | ಡಾ।। ಪ್ರಭುಶಂಕರ, ಡಿ.ವಿ.ಕೆ. ಮೂರ್ತಿ |
| ೯. | ಸಾಹಿತ್ಯ ವಿಹಾರ | ಡಾ।। ಬೆಟಗೇರಿ ಕೃಷ್ಣಶರ್ಮ |
| ೧೦. | ಗಂಗೋತ್ರಿ | ಕುವೆಂಪು ಅಭಿನಂದನ ಗ್ರಂಥ |
| ೧೧. | ಕನ್ನಡ ಡಿಂಡಿಮ | ಕುವೆಂಪು |
| ೧೨. | ಇಳಿದು ಬಾ ತಾಯಿ | ಬೇಂದ್ರೆ ಅಭಿನಂದನ ಗ್ರಂಥ |
| ೧೩. | ಯದುಗಿರಿ | ಪು.ತಿ.ನ ಅಭಿನಂದನ ಗ್ರಂಥ |
| ೧೪. | ಪು.ತಿ.ನ ಒಂದು ಅಧ್ಯಯನ | ಮಿತ್ರ ಪ್ರಕಾಶನ, ಮೈಸೂರು |
| ೧೫. | ಕನ್ನಡಪರ ಚಿಂತನೆ ಮತ್ತು ಪರಂಪರೆ | ಡಾ।। ಕಾ. ವೆಂ. ಶ್ರೀನಿವಾಸಮೂರ್ತಿ, ಕನಕ ಸಾಹಿತ್ಯ ಪ್ರತಿಷ್ಠಾನ ೨೦೦೧ |
| ೧೬. | ಕರ್ನಾಟಕದ ಏಕೀಕರಣ ಚಳುವಳಿ ಮತ್ತು ಕನ್ನಡ ಸಾಹಿತ್ಯ | ಡಾ।। ಸಿ. ಆರ್ ಗೋವಿಂದರಾಜು ೧೯೯೮ |
| ೧೭. | ಕುವೆಂಪು: ಒಂದು ಪುನರನ್ವೇಷಣೆ | ಡಿ.ಎಸ್. ನಾಗಭೂಷಣ, ಲೋಹಿಯಾ ಪ್ರಕಾಶನ ೨೦೦೫ |
| ೧೮. | ಹಾಡೆ ಹಾದಿಯ ತೋರಿತು | ಹೆಚ್.ಎಸ್. ರಾಘವೇಂದ್ರರಾವ್ ಕನ್ನಡ ಸಂಘ, ಬೆಂಗಳೂರು ೧೯೯೫ |
| ೧೯. | ಬೇಂದ್ರೆ ಸಾಹಿತ್ಯ: ಒಂದು ಅಧ್ಯಯನ | ಪ್ರೊ. ಚಿ. ಶ್ರೀನಿವಾಸರಾಜು ಕನ್ನಡ ಸಂಘ, ಬೆಂಗಳೂರು ೨೦೦೦ |

